

# ಪಂಚಾಕ್ಷರಿ ಪುಣ್ಯಶೆಟ್ಟಿ ಅವರ ಬದುಕು - ಬರಹ

( ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಎಂ. ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ )


ಸಂಶೋಧಕರು

**ಧರಮಿಂದ್ರ ಎಚ್. ದೇಶಟ್ಟಿ**

ಸಂಶೋಧನ ಮಾರ್ಗದರ್ಶಕರು

**ಡಾ. ಪ್ರೇಮಾ (ಪ್ರೇಮಿಳಾ) ಸಿರ್ಸೆ**

ಎಂ.ಎ., ಪಿ.ಎಚ್.ಡಿ.

ಗೌರವ ಪ್ರಾಧ್ಯಾಪಕರು, ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ







**...ಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬**

**ಸೆಪ್ಟೆಂಬರ - ೨೦೦೮**



# ಪಂಚಾಕ್ಷರಿ ಪುಣ್ಯಶೆಟ್ಟಿ ಅವರ ಬದುಕು ಬರಹ

(ಕ.ರಾ. ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ

ಎಂ.ಫಿಲ್ ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

**ಧರ್ಮೇಂದ್ರ ಎಚ್. ದೇಶೆಟ್ಟಿ**



ಸಂಶೋಧನ ಮಾರ್ಗದರ್ಶಕರು

**ಡಾ. ಪ್ರೇಮಾ (ಪ್ರೇಮೀಳಾ) ಸಿರ್ಸೆ**

ಎಂ. ಎ; ಪಿಎಚ್.ಡಿ.

ಗೌರವ ಪ್ರಾಧ್ಯಾಪಕರು

ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ





ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬

ಸೆಪ್ಟೆಂಬರ್ - ೨೦೦೮

# ಪ್ರಮಾಣ ಪತ್ರ

"ಪಂಚಾಕ್ಷರಿ ಪುಣ್ಯಶೆಟ್ಟಿ ಅವರ ಬದುಕು ಬರಹ" ಎಂಬ ನಿಬಂಧವನ್ನು ಡಾ. ಪ್ರೇಮಾ ಸಿರ್ಸೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್ ಪದವಿಗಾಗಿ ಕ.ರಾ. ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ : ೧೫-೦೯-೨೦೦೮

Deshetty

ಧರಮಿಂದ್ರ ಎಚ್. ದೇಶೆಟ್ಟಿ
ಎಂ. ಫಿಲ್. ವಿದ್ಯಾರ್ಥಿ
ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ

## ಮಾರ್ಗದರ್ಶಕರ ಪ್ರಮಾಣ ಪತ್ರ

"**ಪಂಚಾಕ್ಷರಿ ಪುಣ್ಯಶೆಟ್ಟಿ ಅವರ ಬದುಕು ಬರಹ**" ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ. ಫಿಲ್ ಪದವಿಗಾಗಿ ಧರಮಿಂದ್ರ ಎಚ್. ದೇಶೆಟ್ಟಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ : ೧೫-೦೯-೨೦೦೮

Pramila

**ಡಾ. ಪ್ರೇಮಾ (ಪ್ರೇಮೀಳಾ) ಸಿರ್ಸೆ**
ಎಂ. ಎ; ಪಿಎಚ್.ಡಿ.
**ಗೌರವ ಪ್ರಾಧ್ಯಾಪಕರು**
ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ

# ಪರಿವಿಡಿ

ಅಧ್ಯಾಯ - 1

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಪ್ರಾಚೀನ ಐತಿಹಾಸಿಕ ಪರಂಪರೆಯನ್ನು ಹೊಂದಿರುವ ಬೀದರ ಸಾಹಿತ್ಯ ಮತ್ತು ಸಂಸ್ಕೃತಿಗೆ ತವರು ನೆಲ. ಕನ್ನಡ ಸಾಹಿತ್ಯದ ಮೊಟ್ಟ ಮೊದಲ ಕೃತಿಯಾದ ಕವಿರಾಜಮಾರ್ಗವು ಈ ಭಾಗದಲ್ಲಿ ರಚನೆಯಾದದ್ದು. ಈ ಭಾಗದಲ್ಲಿ ರಚನೆಯಾದ ವಚನ ಸಾಹಿತ್ಯದಿಂದ ಕನ್ನಡ ಭಾಷೆಗೆ ಮನ್ನಣೆ ಬರುವಂತಾಯಿತು. ಈ ನೆಲದಲ್ಲಿ ಪ್ರಾಚೀನ ಕಾಲದಿಂದಲೂ ಸಾಹಿತ್ಯದ ಅನೇಕ ಪ್ರಕಾರಗಳಾದ ಸಂಪೂ, ವಚನ, ರಗಳೆ ಷಟ್ಪದಿ, ಸಾಂಗತ್ಯ ಮುಂತಾದವುಗಳು ಬೆಳೆದು ಬಂದುದನ್ನು ನಾವು ಕಂಡಿದ್ದೇವೆ. ಅದೇ ರೀತಿ ಇಂದಿನ ಹೊಸಗನ್ನಡ ಯುಗದಲ್ಲಿ ಸಾಹಿತ್ಯದ ಪ್ರಕಾರಗಳಾದ ಕಥೆ, ಕಾದಂಬರಿ, ನಾಟಕ ಮುಂತಾದವುಗಳು ಬೆಳೆದುಕೊಂಡು ಬಂದಿವೆ. ಹೊಸಗನ್ನಡ ಸಾಹಿತ್ಯವು ಪಾಶ್ಚಾತ್ಯದ ಪ್ರಭಾವದಿಂದ ಹೊಸ ಹೊಸ ಸಾಹಿತ್ಯದ ಪ್ರಕಾರಗಳಲ್ಲಿ ಬೆಳೆದು ಶ್ರೀಮಂತಗೊಂಡಿದೆ.

"ಕರ್ನಾಟಕ ರಾಜ್ಯದ ತುತ್ತತುದಿಗಿರುವ ಬೀದರ ವಿಶ್ವಕ್ಕೆ ತನ್ನ ಅಮೂಲ್ಯವಾದ ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಕೊಡುಗೆಯನ್ನು ಕೊಟ್ಟಿದೆ. ಕರ್ನಾಟಕದ ಮುಕುಟ ಮಣಿ ಎನಿಸಿದ ಬೀದರೆ ಜಿಲ್ಲೆಯು ೧೨ನೇ ಶತಮಾನದಲ್ಲಿಯೇ ಸಮಾನತೆ, ಸ್ವಾತಂತ್ರ್ಯ ಹಾಗೂ ಸಹೋದರತ್ವಗಳನ್ನು ಸಾರಿದ ಪುಣ್ಯಭೂಮಿಯಾಗಿತ್ತು. ಒಂದೇ ಏಟಿಗೆ ಜಾತಿ-ಮತ, ವರ್ಣ-ಲಿಂಗಗಳಲ್ಲಿಯ ಭಿನ್ನತೆಯನ್ನು ಕಳೆದೊಗೆದು ಸರ್ವರಿಗೂ ಸಮಬಾಳು ತಂದುಕೊಟ್ಟ ಕ್ರಾಂತಿಕಾರರ ಕ್ಷೇತ್ರವಾಗಿತ್ತು. ಕಾಯಕ ತತ್ವದ ಮೂಲಕ ಕೈಲಾಸ ತೋರಿಸಿದ ಬಸವಣ್ಣನವರ ಕರ್ಮಭೂಮಿ ಬೀದರ ನಾಡು."[೧] ಈ ನಾಡು ಅನೇಕ ಭಾಷೆಗಳ ಮತ್ತು ಸಂಸ್ಕೃತಿಗಳ ಆಡಳಿತದ ಪರಿಣಾಮವಾಗಿ ಸಾಮಾಜಿಕ, ಶೈಕ್ಷಣಿಕ, ಆರ್ಥಿಕವಾಗಿ ಪ್ರಗತಿಯು ಕುಂಠಿತವಾಗಿದೆ. ಇದಕ್ಕೆ ಸಾಹಿತ್ಯವು ಹೊರತಾಗಿಲ್ಲ. ಹನ್ನೆರಡನೇ ಶತಮಾನದಲ್ಲಿ ಈ ನಾಡಿನಲ್ಲಿ ಒಂದು ಹೊಸ ಸಾಹಿತ್ಯವು ಹುಟ್ಟಿಕೊಂಡಿತು. ಅದುವೇ ವಚನಸಾಹಿತ್ಯ. ಇದು ವಿಶ್ವ ಸಾಹಿತ್ಯಕ್ಕೆ ಕನ್ನಡ ಸಾಹಿತ್ಯದ ಕೊಡುಗೆಯಾಗಿದೆ. ಈ ಬೀದರ ಜಿಲ್ಲೆಯು ಅನೇಕ ಶರಣ-ಶರಣೆಯರು ಬಾಳಿ ಬದುಕಿದ ನಾಡಾಗಿದೆ. ಇಂತಹ ನಾಡಿನಲ್ಲಿ ಇಂದಿಗೂ ಸಹ ಕನ್ನಡ ಸಾಹಿತ್ಯವನ್ನು ಉಳಿಸಿ ಬೆಳೆಸಲು ಅನೇಕರು ದುಡಿಯುತ್ತಿದ್ದಾರೆ ಅಥವಾ ಪ್ರಯತ್ನ ಪಡುತ್ತಿದ್ದಾರೆ.

ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯಲ್ಲಿ ಎಂ.ಫಿಲ್. ವಿದ್ಯಾರ್ಥಿಯಾಗಿ ನಾನು ಅಭ್ಯಾಸ ಮಾಡುತ್ತಿದ್ದೇನೆ. ಈ ಸಂದರ್ಭದಲ್ಲಿ ಬೀದರ ಜಿಲ್ಲೆಯ ಹಿರಿಯ ಸಾಹಿತಿಗಳು, ಸದಾ ಕಾಲ ಕನ್ನಡವನ್ನು ಉಳಿಸಿ ಬೆಳೆಸುವುದಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟು ಸದಾಕಾಲ ಕನ್ನಡಪರ ಚಟುವಟಿಕೆಗಳಲ್ಲಿ ಭಾಗಿಯಾಗುವ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರ ಬದುಕು-ಬರಹದ ಬಗ್ಗೆ ಅಧ್ಯಯನ ಕೈಗೊಳ್ಳುವುದು ಸೂಕ್ತ ಎಂದೆನಿಸಿತು. ಈ ವಿಚಾರವನ್ನು ನನ್ನ ಎಂ.ಫಿಲ್ ಮಾರ್ಗದರ್ಶಕರಾದ ಡಾ. ಪ್ರೇಮಾ

---

೧) ೭೩ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಬೀದರ. ಸ್ಮರಣ ಸಂಚಿಕೆ. ಸಂ. ಹಂ.ಪ. ನಾಗರಾಜಯ್ಯ.

ಸಿರ್ಸೆಯವರ ಮುಂದಿಟ್ಟಾಗ ಒಪ್ಪಿಗೆ ಸೂಚಿಸಿದರು. ಈ ವಿಷಯವಾಗಿ ಅಧ್ಯಯನ ಮಾಡಲು ನಮ್ಮ ಅಧ್ಯಯನ ಕೇಂದ್ರದ ನಿರ್ದೇಶಕರಾದ ಡಾ. ಜಗನ್ನಾಥ ಹೆಬ್ಬಾಳೆಯವರು ಸಹ ಒಪ್ಪಿಗೆ ಸೂಚಿಸಿದರು.

ಬೀದರ ಜಿಲ್ಲೆಯಲ್ಲಿ ಕನ್ನಡ ಪರ ಚಟುವಟಿಕೆಗಳನ್ನು ಕೈಗೊಳ್ಳುವ ಪ್ರಮುಖರಲ್ಲಿ ಒಬ್ಬರಾದ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರ ಬಗ್ಗೆ ಅಧ್ಯಯನ ಮಾಡುವುದು ನನಗೆ ಹೆಮ್ಮೆಯ ವಿಷಯ. ಇವರು ಸರಳ ಜೀವಿಯಾಗಿದ್ದು ಅಪ್ಪಟ ಗಾಂಧಿವಾದಿಯಾಗಿದ್ದು, ಜೀವಪರ, ಸಮಾಜಪರ ಕಳಕಳಿಯನ್ನು ಹೊಂದಿದ್ದಾರೆ. ಉರ್ದು, ಮರಾಠಿ ಭಾಷಿಕರ ವಿರೋಧದ ಮಧ್ಯೆಯೂ ಅನೇಕ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಕನ್ನಡದ ಜೈಕಾರ ಹಾಕಿದ್ದವರಾಗಿದ್ದಾರೆ. ಸರಕಾರದ ಮೇಲೆ ಒತ್ತಡ ಹೇರಿ ಜನರಿಂದ ಹಣ ಸಂಗ್ರಹಿಸಿ ಅಲ್ಲಲ್ಲಿ ಕನ್ನಡ ಪರ ಕಾರ್ಯಕ್ರಮ ಮಾಡುವಲ್ಲಿ ಕಾರಣಿಕರ್ತರಾದವರು. ಶ್ರೀಯುತರು ಗ್ರಾಮೀಣ ಪ್ರದೇಶವಾದ ಗುಲ್ಬರ್ಗ ಜಿಲ್ಲೆಯ ಐನೋಲಿಯಲ್ಲಿ ಹುಟ್ಟಿ ಪ್ರೌಢ ಶಿಕ್ಷಣದ ವರೆಗೆ ಉರ್ದು ಕಲಿತು 9 ನೇ ತರಗತಿಗೆ ಕನ್ನಡ ಮಾಧ್ಯಮ ಶಾಲೆಗೆ ಪ್ರವೇಶ ಪಡೆದರು. ಇದು ಅವರಲ್ಲಿ ಕನ್ನಡದ ಪ್ರೇಮ ಅಂಕುರಿಸಲು ಕಾರಣವಾಯಿತು. ಅವರು ವೃತ್ತಿಯಿಂದ ದೈಹಿಕ ಶಿಕ್ಷಕರಾಗಿದ್ದು ಪ್ರವೃತ್ತಿಯಿಂದ ಸಾಹಿತ್ಯ ರಚನೆಯನ್ನು ಮಾಡಿರುವುದು ಅವರ ಕನ್ನಡದ ಮೇಲಿದ್ದ ಪ್ರೀತಿಯನ್ನು ತೋರಿಸುತ್ತದೆ.

ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರಿಗೆ ಮೊದಲಿನಿಂದಲು ಕನ್ನಡವು ಅಷ್ಟು ಇಷ್ಟು ತಿಳಿದವರಾಗಿದ್ದರಿಂದ ಅವರು ಕನ್ನಡ ಸಾಹಿತ್ಯದ ಬಗ್ಗೆ ಅಭಿಮಾನ ಹೊಂದಿದ್ದರು. ಅಂದಿನ ಕಾಲದಲ್ಲಿ ಕನ್ನಡ ಮಾಧ್ಯಮ ಶಾಲೆಗಳು ಇರದ ಕಾರಣ ಅವರು ಉರ್ದುವಿನಲ್ಲಿ ಶಾಲೆ ಕಲಿಯಬೇಕಾಯಿತು. ಶ್ರೀಯುತರು ತಮ್ಮ ವಿದ್ಯಾರ್ಥಿ ಜೀವನದಲ್ಲಿ ಸಾಹಿತಿಗಳ ಭಾಷಣಗಳನ್ನು ಕೇಳಲು ಉತ್ಸುಕರಾಗಿದ್ದರು. ಇವರು ಅನೇಕ ಹಿರಿಯ ಸಾಹಿತಿಗಳ ಭಾಷಣಗಳನ್ನು ಆಲಿಸಿದ್ದರು.

ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಸಾಹಿತ್ಯವನ್ನು ಬರೆಯಲು ಪ್ರಾರಂಭಿಸಿದ್ದು ಅವರು ವೃತ್ತಿ ಜೀವನ ಪ್ರಾರಂಭವಾದ ಮೇಲೆ. ಇವರಿಂದ ಮೊದಲು ರಚನೆಯಾದ ಕೃತಿ ಎಂದರೆ, ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ ಏಕಾಂತ ನಾಟಕ. "ಈ ರೂಪಕವನ್ನು ಬರೆದ ಇವರು ರಾಷ್ಟ್ರೀಯ ಭಾವನೆಯ ಉತ್ಸಾಹವಿದ್ದು ತರುಣರು. ಸಮಾಜ ಪ್ರಗತಿಯ ಪ್ರಜ್ಞೆಯುಳ್ಳವರು ತಮ್ಮ ಈ ಕೃತಿಯಲ್ಲಿನ ಗುಣ ದೋಷಗಳ ಅರಿವು ಉಳ್ಳವರು ಆಗಿದ್ದರು. ಈ ಪುಸ್ತಕದ ಪ್ರಕಟಣೆಗೆ ಒಂದು ವೈಶಿಷ್ಟ್ಯವು ಇದೆ. ಅದೇನೆಂದರೆ ಬೀದರ ಕನ್ನಡ ಪ್ರದೇಶದಲ್ಲಿ ಪ್ರಕಟವಾಗುವ ಪುಸ್ತಕವು ಇದೆ ಮೊತ್ತ ಮೊದಲನೆಯದಯ."[೧] ಹೀಗೆ ಕನ್ನಡ ಸಾಹಿತ್ಯಕ್ಕೆ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಪಾದಾರ್ಪಣೆ ಮಾಡಿದರು.

ಯಾವುದೇ ಒಬ್ಬ ಲೇಖಕನ ಸಾಹಿತ್ಯದ ಬಗ್ಗೆ ವಿವೇಚನೆ ಮಾಡಬೇಕಾದರೆ ಅವರ ಜೀವನ, ಬದುಕು ಮತ್ತು ಬರಹವನ್ನು ಅಧ್ಯಯನ ಮಾಡಬೇಕಾಗುವುದು. ಬದುಕು ಮತ್ತು ಬರಹವು ಜೀವ ಮತ್ತು ದೇಹಕ್ಕೆ ಹೇಗೆ ಸಂಬಂಧವಿರುವುದೋ ಆ ರೀತಿಯಾಗಿ ಬದುಕು ಮತ್ತು ಬರಹವು ಒಂದು ನಾಣ್ಯದ

---

೧) ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಅಜಾದ. ಮುನ್ನುಡಿ.

ಎರಡು ಮುಖಗಳಿದ್ದಂತೆ. ಒಬ್ಬ ಲೇಖಕನ ಬಗ್ಗೆ ಸಮಗ್ರವಾಗಿ ಅಧ್ಯಯನ ಮಾಡಬೇಕಾದರೆ ಅವರ ಜೀವನದ ಸಮಗ್ರ ಚರಿತ್ರೆಯನ್ನು ತಿಳಿದುಕೊಂಡಿರಬೇಕು.

ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರ ಬದುಕು ಬರಹದ ಬಗ್ಗೆ ಸಂಶೋಧನ ಕೈಗೊಳ್ಳುವುದು ಮಹತ್ವದ್ದಾಗಿದೆ. ಏಕೆಂದರೆ ಈ ಭಾಗದಲ್ಲಿ ಕನ್ನಡವನ್ನು ಕಾಪಾಡುವಲ್ಲಿ ಮಹತ್ವದ ಸೇವೆಯನ್ನು ಸಲ್ಲಿಸಿದ ಮಹನೀಯರಾದ ಡಾ. ಚನ್ನಬಸವ ಪಟ್ಟದ್ದೇವರು, ಹಣಮಂತಪ್ಪಾ ಪಾಟೀಲ , ಪ್ರಭುರಾವ ಕಂಬಳಿವಾಲೆ ಮುಂತಾದವರ ಸಾಲಿಗೆ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಸೇರುತ್ತಾರೆ. ಇವರು ಸವೆಸಿದ ಜೀವನ ಮತ್ತು ಸಾಹಿತ್ಯವನ್ನು ಈ ಸಂಶೋಧನ ಅಧ್ಯಯನದಲ್ಲಿ ಅಧ್ಯಯನ ಮಾಡಲಾಗಿದೆ. ಅವರು ಎಲೆ ಮರೆಯ ಕಾಯಿಯಂತೆ ಯಾವುದೇ ಪ್ರತಿಫಲ ಅಪೇಕ್ಷೆ ಇಲ್ಲದೆ, ಕಾಯಾ-ಮನಸಾ-ವಾಚಾ- ಕನ್ನಡ ಸೇವೆಗೆ ತೊಡಗಿಸಿದ ಹಿರಿಯ ಜೀವ. ತಮ್ಮ ಎಪ್ಪತ್ತೈದರ ಇಳಿ ವಯಸ್ಸಿನಲ್ಲಿಯೂ ಇಪ್ಪತ್ತರ ಹರೆಯದವರಂತೆ ನಾಡು ನುಡಿ, ನೆಲ-ಜಲ ಸಂರಕ್ಷಣೆಗೆ ಇಂದಿಗೂ ಕಂಕಣಬದ್ಧರಾಗಿದ್ದಾರೆ.

ನೇರ ನುಡಿ, ಸರಳ ನಡೆ, ದೇಶ ಭಕ್ತಿ ಉದಾತ್ತ ವಿಚಾರಗಳನ್ನು ಹೊಂದಿರುವ ಅವರು ಸಾಹಿತಿಗಳು ಹೌದು. ವಿವಿಧ ಕ್ಷೇತ್ರಗಳಲ್ಲಿ ದುಡಿದರು. ಸಮಾಜದ ಅಲಕ್ಷಕ್ಕೆ ಒಳಗಾದ ಮಹಾದೇವಪ್ಪಾ ಮೀಸೆ, ಬಸವರಾಜ ಹುಡುಗಿ, ಚಕ್ರಕೋಟಿ ಬಾಯವ್ವ, ನಾವದಗಿ ರೇವಪ್ಪಯ್ಯನವರು, ಡಾ. ಚನ್ನಬಸವ ಪಟ್ಟದ್ದೇವರು ಮೊದಲಾದ ಧೀಮಂತ ನಾಯಕರ ಜೀವನ ಚರಿತ್ರೆಯನ್ನು ಬರೆದು ಅಂದಿನ ಸಾಂಸ್ಕೃತಿಕ ಅಂಶಗಳನ್ನು ದಾಖಲೆಯಾಗಿಸುವ ಕೀರ್ತಿಗೆ ಭಾಜನರು. ಅಲ್ಲದೆ ಚಂದ್ರಶೇಖರ ಅಜಾದ ಎಂಬ ನಾಟಕವನ್ನು ಬರೆದಿದ್ದಾರೆ. ಇವರು ಸ್ವತ: ನಾಟಕ ಪ್ರಿಯರು. ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ. ಇವರು ಕನ್ನಡ ಸಾಹಿತ್ಯ ಪರಿಷತ್ತನ್ನು ಬೀದರನ ಜನತೆಗೆ ಪರಿಚಯಿಸಿದ್ದಾರೆ. ಹೆಸರಾಂತ ಸಾಹಿತಿಗಳನ್ನು ಬೀದರ ಜಿಲ್ಲೆಗೆ ಕರೆಯಿಸಿ ಅವರಿಂದ ಭಾಷಣ, ಸಂವಾದ, ಚರ್ಚೆ ಮುಂತಾದ ಕಾರ್ಯಕ್ರಮಗಳನ್ನು ಕೈ ಗೊಂಡಿದ್ದಾರೆ. ಹೀಗೆ ಈ ಭಾಗದ ಕನ್ನಡದ ಸಂಬಂಧವನ್ನು ಗಟ್ಟಿಗೊಳಿಸಲು ಪ್ರಯತ್ನಿಸಿದ್ದಾರೆ. ಕಳೆದ ಹತ್ತು ವರ್ಷಗಳಿಂದ ಅಖಿಲ ಭಾರತೀಯ ಶರಣ ಸಾಹಿತ್ಯ ಪರಿಷತ್ತ ಜಿಲ್ಲಾ ಘಟಕದ ಅಧ್ಯಕ್ಷರಾಗಿ ಒಂದು ಅಖಿಲ ಭಾರತೀಯ ಶರಣ ಸಾಹಿತ್ಯ ಸಮ್ಮೇಳನ, ನಾಲ್ಕು ಜಿಲ್ಲಾ ಸಮ್ಮೇಳನಗಳನ್ನು, ಮೂರು ತಾಲೂಕಾ ಸಮ್ಮೇಳನಗಳನ್ನು ಆಯೋಜಿಸಿದದ್ದಾರೆ. ಕುವೆಂಪು ಕನ್ನಡ ಬಳಗದ ಸಂಸ್ಥಾಪಕ ಅಧ್ಯಕ್ಷರು ಆದ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಹುಟ್ಟು ಹೋರಾಟಗಾರರಾಗಿದ್ದಾರೆ. ಇವರು ಯಾವುದೇ ಪ್ರಶಸ್ತಿ ಗೌರವದ ಕಡೆ ನೋಡಲಿಲ್ಲವಾದರೂ ಇವರನ್ನು ಹಲವಾರು ಗೌರವ ಸನ್ಮಾನಗಳು ಅರಸಿ ಬಂದಿವೆ. ಒಂಬತ್ತನೇ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆವಹಿಸಿದ ಇವರ ಗೌರವದ ಹೆಚ್ಚಾಗಿದೆ. ಇಂತಹ ಕನ್ನಡ ಪರ ಕಾರ್ಯ ಚಟುವಟಿಕೆಯಲ್ಲಿ ಕಾರ್ಯ ನಿರತರಾಗಿರುವ ಶ್ರೀಯವರನ್ನು

ಅಧ್ಯಯನ ಮಾಡುವುದು ಸಂತೋಷದ ವಿಷಯವಾಗಿದೆ.

ಇವರು ರಚಿಸಿದ ಕೃತಿಗಳಲ್ಲಿ ಅನೇಕ ಕೃತಿಗಳು ಜೀವನ ಚರಿತ್ರೆಗಳಾಗಿರುವುದರಿಂದ ಇವರು ಜೀವನ ಚರಿತ್ರಕಾರರೆಂದು ಪ್ರಸಿದ್ಧಿ ಪಡೆದಿದ್ದಾರೆ.

ಒಬ್ಬ ಹಿರಿಯ, ಖ್ಯಾತ ಚರಿತ್ರಕಾರರ ಬಗ್ಗೆ ಅಧ್ಯಯನ ಮಾಡುವಾಗ ಅವರ ಜೀವನದ ಎಲ್ಲ ಪದರುಗಳನ್ನು ವಿವರಿಸುವುದು ಅನಿವಾರ್ಯವಾಗಿರುತ್ತದೆ. ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ನುಡಿದಂತೆ ನಡೆದು ತೋರಿಸಿದ್ದಾರೆ. ಇವರು ಕುಂತಾಗ ನಿಂತಾಗ ವಚನಗಳನ್ನು ಹಾಡುತ್ತಲಿರುತ್ತಾರೆ. ಯಾವಾಗ ನೋಡಿದರು ಅವರ ಜೇಬಿನಲ್ಲಿ ವಚನಗಳ ಗುಚ್ಛ ಇದ್ದೆ ಇರುತ್ತದೆ. ಇಂತಹ ಸಾಹಿತಿಯ ಜೀವನದಲ್ಲಿನ ಅನೇಕ ಘಟನೆಗಳನ್ನು ಅಧ್ಯಯನ ಮಾಡಬೇಕಾಗಿರುತ್ತದೆ. ಅವುಗಳಲ್ಲಿ ಮನೆತನ, ಬಾಲ್ಯ ಮತ್ತು ಶಿಕ್ಷಣ, ಬೆಳೆದು ಬಂದ ಪರಿಸರ, ವೃತ್ತಿ-ಪ್ರವೃತ್ತಿ, ಕೌಟುಂಬಿಕ ಜೀವನ, ಅವರ ವ್ಯಕ್ತಿತ್ವ, ಅವರಿಗೆ ಸಂದ ಗೌರವ ಸನ್ಮಾನಗಳು ಮತ್ತು ಸಾಹಿತ್ಯದ ಮೇಲೆ ಬೆಳಕು ಚೆಲ್ಲುವುದು ಸಮಂಜಸವಾಗುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ನಿಬಂಧವು ಮುಂದುವರೆಯುವುದು.

ಅಧ್ಯಾಯ - ಎರಡು

# ಪಂಚಾಕ್ಷರಿ ಪುಣ್ಯಶೆಟ್ಟಿಯವರ ಜೀವನ ಮತ್ತು ಸಾಧನೆ

★ ಮನೆತನದ ಹಿನ್ನೆಲೆ

★ ಬಾಲ್ಯ ಮತ್ತು ಶಿಕ್ಷಣ

★ ಕೌಟುಂಬಿಕ ಜೀವನ

★ ವೃತ್ತಿ ಜೀವನ

★ ಸಾಹಿತ್ಯಕ ಹಿನ್ನೆಲೆ ಮತ್ತು ಪರಿಸರ

★ ಸಾಮಾಜಿಕ ಸೇವೆ

★ ಪ್ರಶಸ್ತಿ ಮತ್ತು ಗೌರವ

★ ವ್ಯಕ್ತಿತ್ವ

## ಅಧ್ಯಾಯ - ಎರಡು

# ಪಂಚಾಕ್ಷರಿ ಪುಣ್ಯಶೆಟ್ಟಿಯವರ ಜೀವನ ಮತ್ತು ಸಾಧನೆ

ಪಂಚಾಕ್ಷರಿ ಪುಣ್ಯಶೆಟ್ಟಿಯವರಿಗೆ ಜನ್ಮ ಕೊಟ್ಟ ಊರು ಐನೋಲಿ. ಈ ಗ್ರಾಮವು ಕಲ್ಬುರ್ಗಿ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನಿಂದ ಉತ್ತರಕ್ಕೆ ಐದು ಕಿಲೋಮೀಟರ್ ದೂರದಲ್ಲಿದೆ. ಈ ಗ್ರಾಮದ ಪೂರ್ವ ದಿಕ್ಕಿನ ಕಡೆಗೆ ಉತ್ತರದಿಂದ ದಕ್ಷಿಣಕ್ಕೆ ಮೈಲುಗಳ ಗಟ್ಟಲೆ ಉದ್ದಕ್ಕೆ 'ಬಾಲಾಘಾಟ' ಪರ್ವತ ಹರಡಿದೆ. ಇದು ಬಹಳ ದಟ್ಟ ಕಾಡು. ಇದೇ ಕಾಡಿನಲ್ಲಿ (ಅರಣ್ಯದಲ್ಲಿ) 'ಗೊಟ್ಟಂಗೊಟ್ಟಿ' ಬೆಟ್ಟಗಳ ಗರ್ಭದಲ್ಲಿ ಚಂದ್ರಂಪಳ್ಳಿ ಜಲಾಶಯವು ಇದೆ. ಇದು ಪ್ರವಾಸಿಗಳ ತಾಣವಾಗಿದೆ. ಆಂಧ್ರ ಪ್ರದೇಶ, ಗುಲಬರ್ಗಾ ವಿಭಾಗ ಹಾಗೂ ಬೀದರ ಜಿಲ್ಲೆಯ ಕಾಲೇಜು ವಿದ್ಯಾರ್ಥಿ-ವಿದ್ಯಾರ್ಥಿನಿಯರು ಶೈಕ್ಷಣಿಕ ಪ್ರವಾಸ ಕೈಗೊಳ್ಳುತ್ತಾರೆ. ಗೊಟ್ಟಂಗೊಟ್ಟಿ ಬೆಟ್ಟದಲ್ಲಿ ಚಾಲುಕ್ಯರ ಕಾಲದ ವೀರಗಲ್ಲುಗಳು ಹಾಗೂ ಖಿಲ್ಲೆಯ ಅವಶೇಷಗಳು ಕಾಣ ಸಿಗುತ್ತವೆ. ರಾಷ್ಟ್ರಕೂಟರ ರಾಜಧಾನಿಯಾಗಿದ್ದ ಮಾನ್ಯಖೇಡವು ಇಲ್ಲಿಂದ ಸುಮಾರು 40 ಕಿಲೋಮೀಟರ್ ದೂರದಲ್ಲಿದೆ.

ಮಹಾಭಾರತದ ಪಾಂಡವರು ಗೊಟ್ಟಂಗೊಟ್ಟಿ ಅರಣ್ಯ ಪ್ರದೇಶದಲ್ಲಿ ವನವಾಸ ಕಳೆದಿದ್ದರೆಂದು ಜನರ ನಂಬಿಕೆಯಾಗಿದೆ. ಈ ರಮ್ಯವಾದ ಏಕಾಂತ ಸ್ಥಳವು ಸಾಧು, ಸಂತರ, ಶರಣರ ಆವಾಸ ಸ್ಥಾನವಾಗಿದೆ. ಬೀದರ ಜಿಲ್ಲೆಯ ಹಾಗೂ ಕಲ್ಬುರ್ಗಿ ಜಿಲ್ಲೆಯ ಅನೇಕ ಶರಣರು ಇಲ್ಲಿ ತಪಸ್ಸನ್ನಾಚರಿಸಿದ್ದಾರೆಂದು ಅವರ ಜೀವನ ಚರಿತ್ರೆಯಿಂದ ತಿಳಿದು ಬರುತ್ತದೆ. ಅವರಲ್ಲಿ ಮುಖ್ಯರಾದವರೆಂದರೆ, ಕರಕನಳ್ಳಿಯ ಬಕ್ಕಪ್ರಭುಗಳು ಒಬ್ಬರಾಗಿದ್ದಾರೆ. ಇಲ್ಲಿ ಹಿಂದೆ ಹುಲಿಗಳು, ಚಿರತೆಗಳು ಕಂಡು ಬರುತ್ತಿದ್ದವು. ಆದರೆ ಇಂದು ಅವು ನಿರ್ನಾಮವಾಗಿವೆ. ನಿಜಾಮ ಆಡಳಿತದಲ್ಲಿ ನವಾಬರು ಬೇಟೆಯಾಡಿದ ಪರಿಣಾಮ ಎಂದೇ ಹೇಳಬೇಕು.

ಚಿಂಚೋಳಿಗೆ ಹತ್ತಿಕೊಂಡಿರುವ ಐನೋಲಿ ಗ್ರಾಮದಲ್ಲಿ ಸುಮಾರು ಇನ್ನೂರು ವರ್ಷಗಳ ಹಿಂದೆ ಕರಬಸಪ್ಪ ಕವಿಗಳು ಆಗಿ ಹೋಗಿದ್ದಾರೆ. ಇವರು ಉಭಯ ಭಾಷಾ (ಕನ್ನಡ ಹಾಗೂ ಸಂಸ್ಕೃತ) ಕವಿಗಳಾಗಿದ್ದರು. ಇತ್ತೀಚೆಗೆ ಇವರ ಸಾಹಿತ್ಯದ ಮೇಲೆ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಎಂ. ಫಿಲ್ ಮತ್ತು ಪಿಎಚ್. ಡಿ. ಮಾಡಿದ್ದಾರೆ. ಇಂತಹ ಪುಣ್ಯ ಪರಿಸರದಲ್ಲಿ ನಮ್ಮ ಲೇಖಕರ ಜನ್ಮವಾಯಿತು.

**ಮನೆತನದ ಹಿನ್ನೆಲೆ:**

ಪಂಚಾಕ್ಷರಿಯವರ ಮನೆತನದ ಹೆಸರು ಪುಣ್ಯಶೆಟ್ಟಿ. ಈ ಮನೆತನದವರ ಉದ್ಯೋಗ ಒಕ್ಕಲುತನ. ಇವರು ಶ್ರೀಮಂತ ಮನೆತನದವರಲ್ಲ, ಬಡವರು ಅಲ್ಲ, ಮಧ್ಯಮ ವರ್ಗದ ಮನೆತನದವರು. ಮಹಾನ ಶಿವಶರಣರಾದ ನಾವದಗಿ ರೇವಪ್ಪಯ್ಯನವರು ಬಂದು ಇಳಿಯುತ್ತಿದ್ದುದು ಇವರ ಮನೆಯಲ್ಲಿ, ಹಾರಕೂಡದ ಚನ್ನ ಬಸವೇಶ್ವರರು, ಚಿಟ್ಟಗುಪ್ಪಾದ ವಾಮದೇವರು ಅಲ್ಲದೆ ನೂರಾರು ಜಂಗಮರು, ಸಾಧು ಸತ್ಪುರುಷರ ಲಿಂಗಾರ್ಚನೆ ಇವರ ಮನೆಯಲ್ಲಿಯೇ ನಡೆಯುತ್ತಿತ್ತು. ಇದೊಂದು ಮಹಾಮನೆಯಂತೆ ಹಿಂದೆ

ಪ್ರಸಿದ್ಧವಾಗಿತ್ತು.

ಪುಣ್ಯಶೆಟ್ಟಿ ಮನೆತನದ ಹಿರಿಮೆಯ ಒಂದು ಘಟನೆ ಹೀಗಿದೆ. ಚಿಂಚೋಳಿಯ ಪ್ರದೇಶವು ದೇಶಮುಖರ ಒಡೆತನಕ್ಕೆ ಸೇರಿತ್ತು. ಇವರು ಐನೋಲಿಯ ಹಣಮಂತದೇವರ ಭಕ್ತರಾಗಿದ್ದರು. ಪ್ರತಿ ವರ್ಷ ಹನುಮಂತ ದೇವರ ಜಯಂತಿಗೆ ಅವರು ರಾಜ ವೈಭವದಿಂದ ಆಗಮಿಸಿ ಬ್ರಾಹ್ಮಣರಿಗೆ ಅನ್ನ ಸಂತರ್ಪಣೆ ಮಾಡುತ್ತಿದ್ದರು. ಆನೆಯನ್ನು ಹತ್ತಿ ರಾಜಾ ರಾಣಿಯರು ಬರುತ್ತಿದ್ದರಂತೆ.! ಒಮ್ಮೆ ಆನೆಗೆ ಮದವೇರಿದ ಕಾರಣ ತಪ್ಪಿಸಿಕೊಂಡು ಪುಣ್ಯಶೆಟ್ಟಿಯವರ ಕಬ್ಬಿನ ಗದ್ದೆ ತುಳಿದು ಹಾನಿ ಮಾಡಿತ್ತು. ಆಗ ಮಹಾರಾಜರು ವೀರಬಸಪ್ಪ ಪುಣ್ಯಶೆಟ್ಟಿಯವರನ್ನು ಕರೆಯಿಸಿಕೊಂಡು ನಾಶವಾದ ಬೆಳೆಯ ಮೌಲ್ಯ ಎಷ್ಟು? ನೀವು ಕೇಳಿದಷ್ಟು ಹಣ ಕೊಡುತ್ತೇವೆ ಎಂದರು. ಆಗ ವಿಚಾರ ಮಾಡಿ ಸ್ವಾಭಿಮಾನಿಯಾದ ವೀರಬಸಪ್ಪನವರು ದೇಶಮುಖರಿಗೆ ಕೊಟ್ಟ ಉತ್ತರ ರಾಜಾ ಪೌರುಷನು ವಿಶ್ವವಿಜೇತ ಸಿಕಂದರನಿಗೆ ಕೊಟ್ಟ ಉತ್ತರದಂತೆ ಮಾರ್ಮಿಕವಾಗಿದೆ. ವೀರಬಸಪ್ಪನವರು, ರಾಜರೇ ದಿನಾಲೂ ನೂರಾರು ಎಮ್ಮೆಗಳು ನಮ್ಮ ತೋಟದಲ್ಲಿ ಬಂದು ಬೆಳೆ ತಿಂದು ಹೋಗುತ್ತವೆ. ಇಲ್ಲಿಯವರೆಗೆ ನಾವು ಯಾರಿಂದಲೂ ಹಣ ಸ್ವೀಕರಿಸಿಲ್ಲ. ಇದೊಂದು ಪ್ರಾಣಿ ತಿಂದರೆ ನಮ್ಮದೇನು ಕಡಿಮೆಯಾಗುತ್ತದೆ.? ದೇವರು ಕೊಡುವನು ಬೇರೆ ಇದ್ದಾನೆ ಎಂದು ಹೇಳಿದರಂತೆ. ಅವರ ಈ ಸ್ವಾಭಿಮಾನದ ಉತ್ತರವೆ ಈ ಮನೆತನದ ಕೀರ್ತಿಯನ್ನು ಹೆಚ್ಚಿಸಿತು.

ಈ ಮನೆತನದ ಹೆಸರು ಚಿಂಚೋಳಿ ತಾಲೂಕಿನಾದ್ಯಂತ ಇನ್ನೂ ಹೆಸರುವಾಸಿಯಾಗಿದೆ. ಇನ್ನೂ ಕೆಲವರು ಈ ಮನೆತನದ ಹೆಸರನ್ನು ಹೆಚ್ಚಿಸಿದವರಾಗಿದ್ದಾರೆ. ಅವರೆಂದರೆ ಲಿಂ. ಶಿವರುದ್ರಪ್ಪಾ, ಲಿಂ. ಚನ್ನವೀರಪ್ಪ, ಲಿಂ. ಸಿದ್ಧಮ್ಮಾ, ಲಿಂ. ಷಣ್ಮುಖಪ್ಪ, ಲಿಂ. ನಾಗಶಟ್ಟಿ ಮುಂತಾದವರು. ಇವರೆಲ್ಲರೂ ಬಸವಾದಿ ಶರಣರ ಮೇಲೆ ನಿಷ್ಠೆಯುಳ್ಳವರಾಗಿದ್ದರು. ಬಡವರ ಬಗ್ಗೆ ಕಾಳಜಿಯುಳ್ಳವರು ಆಗಿದ್ದರು.

ಪುಣ್ಯಶೆಟ್ಟಿಯವರ ತಂದೆ ತಾಯಿವರಾದ ಶಿವರುದ್ರಪ್ಪಾ ಮತ್ತು ನೀಲಮ್ಮ ಇವರು ಧಾರ್ಮಿಕ ಪ್ರವೃತ್ತಿಯವರಾಗಿದ್ದರು. ಕೃಷಿಕರಾದ ಶಿವರುದ್ರಪ್ಪನವರು ಬಸವಣ್ಣನವರ ಅನುಯಾಯಿಗಳಾಗಿದ್ದರು. ಅಸ್ಪೃಶ್ಯರೊಡನೆ ಸಲುಗೆಯಿಂದ ವ್ಯವಹರಿಸುತ್ತಿದ್ದರು. ಅಸ್ಪೃಶ್ಯರ ಬಾವಿಯಲ್ಲಿನ ನೀರು ಸೇಂದಿ ಕುಡಿದು ಊರಿನಲ್ಲಿ ಜಾತಿಯ ಜಗಳ ಪರಿಹರಿಸುತ್ತಿದ್ದರು. ಇದು ನಡೆದದ್ದು ಸ್ವಾತಂತ್ರ್ಯ ಪೂರ್ವದಲ್ಲಿ. ಇದೊಂದು ಅಪೂರ್ವ ಘಟನೆ. ಶರಣರ ತತ್ವ ಮೈಗೂಡಿಸಿಕೊಂಡಿರುವುದನ್ನು ಈ ಘಟನೆಯಿಂದ ತಿಳಿದು ಬರುತ್ತದೆ. ನೀಲಮ್ಮ ತಾಯಿಯು ದೈವ ಭಕ್ತಳು. ಜಗುಲಿಯ ಮೇಲೆ ಯಾವ ದೇವರನ್ನು ಇಟ್ಟಿರಲಿಲ್ಲ. ನಾವದಗಿಯ ರೇವಪ್ಪಯ್ಯನವರ ಭಾವಚಿತ್ರ ಮಾತ್ರ ಜಗುಲಿಯ ಮೇಲೆ ಶೋಭಿಸುತ್ತಿತ್ತು. ಮಕ್ಕಳಿಗೆ ರೋಗಭಾದೆ ಬಂದಾಗ ನಾವದಗಿಯ ರೇವಪ್ಪಯ್ಯನವರ ಮುಂದಿರುವ ಪ್ರಸಾದ ಸೇವನೆ ಮಾಡಲು ಹಾಗೂ ಅವರ ಮುಂದೆ ಇಟ್ಟಿರುವ ಭಸ್ಮ ಧರಿಸಿಕೊಳ್ಳಲು ಹೇಳುತ್ತಿದ್ದರು. ಭಕ್ತಿಯ ಪ್ರಭಾವದಿಂದ ಬಂದ ಎಲ್ಲಾ ರೋಗಗಳು ಪರಿಹಾರವಾಗುತ್ತಿದ್ದವು ಎಂದು ಪಂಚಾಕ್ಷರಿಯವರು ಹೇಳುತ್ತಾರೆ.

ಇವರ ಸೋದರ ಸಂಬಂಧಿಯಾದ ಷಣ್ಮುಖಪ್ಪ ಪುಣ್ಯಶೆಟ್ಟಿಯವರು ಇಡಿ ಗ್ರಾಮಕ್ಕೆ ಮಾದರಿ ವ್ಯಕ್ತಿಗಳಾಗಿದ್ದರು. ಇವರ ಸಚ್ಚಾರಿತ್ರ್ಯವನ್ನು ಇಂದಿಗೂ ಜನರು ಕೊಂಡಾಡುತ್ತಾರೆ. ದೈವಭಕ್ತರಾದ ಇವರು ನಿತ್ಯ ಎರಡು ಸಲ ಲಿಂಗಾರ್ಚನೆ ಮಾಡುತ್ತಿದ್ದರಲ್ಲದೆ ಪ್ರತಿ ಗುರುವಾರ ಮನೆಯಲ್ಲಿ ಶಿವಭಜನೆ

ಇಟ್ಟುಕೊಳ್ಳುತ್ತಿದ್ದರು.ಗ್ರಾಮದಲ್ಲಿ ಯಾರೆ ಹೊಸಬರು ಬರಲಿ ಅವರು ಇವರ ಮನೆಯಲ್ಲಿ ಪ್ರಸಾದ ಸೇವಿಸುತ್ತಿದ್ದರು. ರಾಚಮ್ಮ ತಾಯಿಯವರು ಕೂಡ ಅನ್ನಪೂರ್ಣೆಯಂತೆ ಬಂದವರಿಗೆ ಬೇಸರಿಕೆ ಇಲ್ಲದೆ ಉಣಬಡಿಸುತ್ತಿದ್ದರು.

**ಬಾಲ್ಯ ಮತ್ತು ಶಿಕ್ಷಣ :**

ಶ್ರೀ ಪಂಚಾಕ್ಷರಿಯವರ ತಂದೆಯಾದ ಶಿವರುದ್ರಪ್ಪನವರು ಖಾಸಗಿ ಶಾಲೆಯಲ್ಲಿ ಲೆಕ್ಕ ಪತ್ರ ಮತ್ತು ಕನ್ನಡ ಕಲಿತವರಾಗಿದ್ದರು. ಕನ್ನಡ ಓದುವುದರಲ್ಲಿ ಬಹಳ ನಿಪುಣರು. ಊರಿನ ಜನರಿಗೆ ಬಂದ ಪತ್ರಗಳನ್ನು ಓದಿ ಹೇಳುವಲ್ಲಿ ಮತ್ತು ನ್ಯಾಯ ತೀರ್ಮಾನ ಮಾಡುವಲ್ಲಿ ಸಹಕರಿಸುತ್ತಿದ್ದರು. ಚನ್ನಪ್ಪ ಉತ್ತಂಗಿಯವರು ಸಂಪಾದಿಸಿದ 'ಸರ್ವಜ್ಞನ ವಚನಗಳು'ವನ್ನು ಶಿವರುದ್ರಪ್ಪನವರು ಪಠಿಸುತ್ತಿದ್ದರು. ಪಂಚಾಕ್ಷರಿಯವರು ಮೊದಲು ಕೈಯಲ್ಲಿ ಹಿಡಿದದ್ದು ಸರ್ವಜ್ಞನ ವಚನಗಳು ಎಂಬ ಗ್ರಂಥ. ಈ ಗ್ರಂಥದ ಪ್ರಭಾವ ಪಂಚಾಕ್ಷರಿಯವರ ಮೇಲೆ ಬೀರಿದೆ. ತಾಯಿಯಾದ ನೀಲಮ್ಮನವರು ಸ್ವಾಭಿಮಾನಿ ಹಾಗೂ ಮಿತಭಾಷಿ ನ್ಯಾಯ, ನಿಷ್ಠುರಿಗಳಾಗಿದ್ದರು. ಮಕ್ಕಳ ನಡತೆಯ ಬಗ್ಗೆ ಕಟ್ಟೆಚ್ಚರ ವಹಿಸುತ್ತಿದ್ದರು. ತಪ್ಪು ಯಾರದೆ ಇರಲಿ ಮಕ್ಕಳಿಗೆ ಮಾತ್ರ ಅವರು ಝೇಂಕರಿಸುತ್ತಿದ್ದರು. ಇವರ ಈ ನೀತಿ ಶಿಕ್ಷಣ ಪಂಚಾಕ್ಷರಿಯವರ ಮೇಲೆ ಪ್ರಭಾವ ಬೀರಿತು.

ಇಂತಹ ಶರಣ ಸಂಪ್ರದಾಯದ ತಂದೆ ತಾಯಿ ಹಾಗೂ ಸುಸಂಸ್ಕೃತ ಮನೆತನದಲ್ಲಿ ಎರಡನೆಯವರಾಗಿ ದಿನಾಂಕ೦೩-೦೨-೧೯೩೫ ರಂದು ಜನಿಸಿದವರು ಶ್ರೀ ಪುಣ್ಯ ಶೆಟ್ಟಿಯವರು. ಇವರಿಗೆ ಮೂರು ಜನ ಸಹೋದರರು ಹಾಗೂ ನಾಲ್ಕು ಜನ ಸಹೋದರಿಯರು ಇದ್ದರು. ಅಂದರೆ ಒಟ್ಟು ಎಂಟು ಜನ ಮಕ್ಕಳು. ಇವರಲ್ಲಿ ಮೊದಲನೆಯವರು ಬಸವರಾಜ ಇವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ. ಮೂರನೆಯವರು ಷಡಕ್ಷರಿ. ಇವರು ಕೂಡ ಶಿಕ್ಷಕ ವೃತ್ತಿಯನ್ನು ಮಾಡಿದವರಾಗಿದ್ದಾರೆ. ನಾಲ್ಕನೆಯವರು ಗಂಗಾಧರ ಇವರು ಕೃಷಿಕಾರರು. ಇವರು ಆದರ್ಶ ಕೃಷಿಕಾರರಾದ ಕಾರಣ ಇವರಿಗೆ ರಾಜ್ಯ ಸರ್ಕಾರವು ಇಡೀ ದೇಶವೆಲ್ಲ ಸಂಚರಿಸುವ ಅವಕಾಶ ಮಾಡಿಕೊಟ್ಟಿತ್ತು. ಹಾಗೂ ನಾಲ್ಕು ಜನ ಸಹೋದರಿಯರೆಂದರೆ ಬಸಮ್ಮ, ಈಶ್ವರಮ್ಮ, ಮಲ್ಲಮ್ಮ, ಶಾರದಾ ಹೀಗೆ ಇವರ ಕುಟುಂಬವು ತುಂಬು ಕುಟುಂಬವಾಗಿತ್ತು.

ಶ್ರೀ ಪಂಚಾಕ್ಷರಿಯವರ ಪ್ರಾಥಮಿಕ ಶಿಕ್ಷಣವು ಸ್ವಂತ ಊರಾದ ಐನೊಲಿಯಲ್ಲಿ ನೆರವೇರಿತು ಐನೊಲಿಯ ಶಾಲೆಯಲ್ಲಿ ಕಟ್ಟಡದ ಕೊರತೆ ಇದ್ದುದರಿಂದ ಹನುಮಂತ ದೇವಾಲಯವೇ ಪಾಠ ಶಾಲೆಯಾಗಿತ್ತು. ಈ ಶಾಲೆಯು ಉರ್ದು ಮಾಧ್ಯಮವಾಗಿತ್ತು. ಇಲ್ಲಿ ನಾಲ್ಕನೇ ತರಗತಿಯವರೆಗೆ ಮಾತ್ರ ಶಿಕ್ಷಣ ಕೊಡಲಾಗುತ್ತಿತ್ತು. ಈ ಶಾಲೆಯಲ್ಲಿ ಪಂಚಾಕ್ಷರಿಯವರ ಸೋದರ ಸಂಬಂಧಿಯಾದ ಶಂಭುಲಿಪ್ಪ ಪುಣ್ಯಶೆಟ್ಟಿಯವರು ಹಂಗಾಮಿ ಶಿಕ್ಷಕರಾಗಿದ್ದರು. ಇವರ ಮಾರ್ಗದರ್ಶನ ಪುಣ್ಯಶೆಟ್ಟಿಯವರಿಗೆ ದೊರೆಯಿತು. ಮುಂದಿನ ವಿದ್ಯಾಭ್ಯಾಸಕ್ಕಾಗಿ ಚಿಂಚೋಳಿಗೆ ಹೋಗಬೇಕಾಯಿತು. ಐನೊಲಿಯಿಂದ ಚಿಂಚೋಳಿ ಪಟ್ಟಣಕ್ಕೆ ವಿದ್ಯಾರ್ಥಿಗಳೊಂದಿಗೆ ಪಾದಚಾರಿಯಾಗಿಯೇ ಹೋಗಬೇಕಾಗಿತ್ತು. ಅಂದಿನ

ಕಾಲದಲ್ಲಿ ಗಡಿಯಾರ ಇರದ ಕಾರಣ ಸೂರ್ಯನ ಬಿಸಿಲಿನ ನೆರಳನ್ನು ನೋಡಿ ಶಾಲೆಗೆ ಹೋಗುತ್ತಿದ್ದರು. ಇದರಿಂದ ಕೆಲವು ಸಲ ಶಾಲೆಗೆ ಸರಿಯಾದ ಸಮಯಕ್ಕೆ ಹೋಗುತ್ತಿರಲಿಲ್ಲ. ಶಾಲೆಯ ಅಂಗಳದಲ್ಲಿ ಒಂದು ಕಂಬ ನೆಟ್ಟಿದ್ದರು. ಅದರ ಮೇಲೆ ಎರಡು ಫಲಕಗಳು ಜೋಡಿಸಲಾಗಿತು. ಒಂದು ಫಲಕದ ಮೇಲೆ ಕೂಗುತ್ತಿರುವ ಹುಂಜದ ಗೊಂಬೆಯೊಂದು ಚಿತ್ರಿಸಲಾಗಿತ್ತು. ಅದರ ಕೆಳಗಿನ ಫಲಕದ ಮೇಲೆ ಉರ್ದುವಿನಲ್ಲಿ-

ಗಯಾವಖ್ತ ಫಿರ್ ಹಾಥ ಆತಾ ನಹಿಂ !

ಜಹಾಂ ಮೆ ದೌರ ಅಪನಾ ದಿಖಾತಾ ನಹಿಂ !!

ಎಂದು ಬರೆದಿತ್ತು. ಹೀಗೆಂದರೆ ಹೋದ ಸಮಯ ಮತ್ತೆ ಕೈಗೆ ಎಟುಕದು, ಜಗತ್ತಿಗೆ ತನ್ನ ಆಳ್ವಿಕೆ ಸಾಗದು. ಈ ವಾಕ್ಯವು ಪಂಚಾಕ್ಷರಿಯವರ ಇಂದಿಗೂ ನೆನಪಿನಲ್ಲಿ ಉಳಿಯುವಂತೆ ಮಾಡಿದೆ ಎಂದು ನೆನಪಿಸಿಕೊಳ್ಳುತ್ತಾರೆ.

ಇವರ ಸಹಪಾಠಿಗಳಾದ ಮಾಣಿಕರಾವ ಧನಶ್ರಿ, ನಾಗಪ್ಪಾ ಯಾಲಲ, ರಾಮಶೆಟ್ಟಿ ಅಣವಾರ, ಬಸವಣ್ಯಪ್ಪ ಕಲ್ಯಾಣಿ, ಅಂಬಾದಾಸ, ಚಂದ್ರಶೆಟ್ಟಿ ಬುಗ್ಗಿ ಮುಂತಾದವರು ಪ್ರತಿಭಾವಂತ ವಿದ್ಯಾರ್ಥಿಗಳಾಗಿದ್ದರು. ಇವರನ್ನು ನೋಡಿ ಅವರಂತೆ ಪರೀಕ್ಷೆಯಲ್ಲಿ ಸರಿ ಸಮಾನ ಅಂಕಗಳನ್ನು ಪಡೆಯಬೇಕೆಂಬ ಹಂಬಲ ಇವರಿಗೆ ಉಂಟಾಗುತ್ತಿತ್ತು. ಏಳನೇ ವರ್ಗದಲ್ಲಿ ಅಭ್ಯಾಸ ಮಾಡುತ್ತಿರುವಾಗ ಮಹಾತ್ಮಾ ಗಾಂಧೀಜಿಯವರು ಹುತಾತ್ಮರಾದರು. ಈ ವಾರ್ತೆಯನ್ನು ಕೇಳಿ ಶಾಲೆಗೆ ಹೋಗದೆ ಮನೆಗೆ ಮರಳಿದರು. ಈ ದುಃಖ ಸಹಿಸಲಾಗದೆ ಕಣ್ಣೀರುಗಳೆದಿದ್ದರು. ಇಂತಹ ರಾಷ್ಟ್ರೀಯ ವಿಚಾರಗಳು ಇವರ ಸೋದರ ಸಂಬಂಧಿಯಾದ ನಾಗಶೆಟ್ಟಿ ಪುಣ್ಯಶೆಟ್ಟಿಯವರಿಂದ ತಿಳಿದುಕೊಳುತ್ತಿದ್ದರು. ಇವರು ಸುಸಂಸ್ಕೃತ ನಾಗರಿಕರಾಗಿದ್ದರು, ರಾಷ್ಟ್ರ ಚಿಂತಕರಾಗಿದ್ದರು. ಅಂದಿನ ಕಾಲದಲ್ಲಿ ಸ್ವಾತಂತ್ರ ಪೂರ್ವದಲ್ಲಿ ಉರ್ದು ಪತ್ರಿಕೆಗಳು ತರಿಸಿ ಓದುತ್ತಿದ್ದರು. ರಜಾಕಾರರ ಉಪಟಳ, ನಿಜಾಮನ ದುರಾಡಳಿತ, ರಾಷ್ಟ್ರ ಪ್ರೇಮಿಗಳಿಗೆ ಹಿಂಸೆಕೊಡುವುದು, ದೇಶಭಕ್ತರ ತ್ಯಾಗ ಹಾಗೂ ಬಲಿದಾನದ ವಿಚಾರಗಳನ್ನು ಪತ್ರಿಕೆಯಲ್ಲಿ ಬಂದಾಗ ಗ್ರಾಮದ ಜನರಿಗೆ ಓದಿ ಹೇಳುತ್ತಿದ್ದರು. ಇವರಿಂದ ಗ್ರಾಮದಲ್ಲಿ ರಾಜಕೀಯದ ಬಗ್ಗೆ ಆಸಕ್ತಿ ಕೆರಳಿಸುತ್ತಿದ್ದರು. ಸ್ವಾತಂತ್ರ್ಯ ನಂತರ ಕನ್ನಡದ ದಿನ ಪತ್ರಿಕೆಗಳು. ಸಂಯುಕ್ತ ಕರ್ನಾಟಕ, ಪ್ರಜಾವಾಣಿ, ತರಂಗ, ಕರ್ಮವೀರ ಸುಧಾ ಮುಂತಾದವುಗಳನ್ನು ತರಿಸಿಕೊಂಡು ತಾವು ಸ್ವತಃ ಓದಿದಲ್ಲದೆ ಊರಿನ ಜನರಿಗೆ ಓದಲು ಅವಕಾಶ ಮಾಡಿಕೊಡುತ್ತಿದ್ದರು. ಗಳಗನಾಥರ ಕಾದಂಬರಿ, ಕೃಷ್ಣಮೂರ್ತಿ ಪುರಾಣಿಕ, ಅನಕೃ, ಬಸವರಾಜ ಕಟ್ಟಿಮನಿ, ಮುಂತಾದವರ ಕಾದಂಬರಿಗಳು ಮಧ್ಯರಾತ್ರಿಯವರೆಗೆ ಓದುವ ಚಟ ಇಟ್ಟುಕೊಂಡಿದ್ದರು. ಇವರ ಪ್ರಭಾವವು ಪಂಚಾಕ್ಷರಿಯವರ ಮೇಲೆ ಓದುವ ಚಟವನ್ನು ಬೆಳೆಸಿತು. ಮತ್ತು ಪಂಚಾಕ್ಷರಿಯವರಲ್ಲಿ ಕನ್ನಡ ಪ್ರೇಮ ಹಾಗೂ ದೇಶಪ್ರೇಮ ಉಂಟಾಗಲು ಇವರೆ ಕಾರಣರಾದರು.

ಶಾಲೆಯಲ್ಲಿ ಉರ್ದು ಮಾಧ್ಯಮವಿದ್ದರೂ ಎರಡನೇ ಭಾಷೆಯಾಗಿ ಕನ್ನಡ ಬೋಧಿಸುತ್ತಿದ್ದರು. ಕೃಷ್ಣಾಚಾರ ಸರ ಎಂಬ ಶಿಕ್ಷಕರು ಕನ್ನಡ ಬೋಧಿಸುತ್ತಿದ್ದರು. ಇವರಿಂದ ಕನ್ನಡದ ಅಭಿಮಾನ ಬಾಲ್ಯದಿಂದಲೇ ಅಂಕುರಿಸಿತು. ಉರ್ದು ಮಾಧ್ಯಮದಲ್ಲಿ ಏಳನೆ ಇಯತ್ತೆಯಲ್ಲಿ ಉತ್ತೀರ್ಣರಾದರು.

ಚಿಂಚೋಳಿಯಲ್ಲಿ ಪ್ರೌಢ ಶಿಕ್ಷಣ ಸರಿಯಾಗಿ ಇಲ್ಲದ ಕಾರಣ ತಾಂಡೂರಿಗೆ ಹೋಗಬೇಕಾಯಿತು. ತಾಂಡೂರು ಅಂದು ರಾಜ್ಯ ಪುನರ ವಿಂಗಡನೆಕ್ಕಿಂತ ಮೊದಲು ಕಲ್ಬುರ್ಗಿ ಜಿಲ್ಲೆಯ ಒಂದು ತಾಲೂಕು ಕೇಂದ್ರವಾಗಿತ್ತು. ಈಗ ಆಂಧ್ರ ಪ್ರದೇಶಕ್ಕೆ ಸೇರಿದೆ. ಇವರ ಪ್ರೌಢ ಶಿಕ್ಷಣವು ತಾಂಡೂರಿನಲ್ಲಿ ಪ್ರಾರಂಭಿಸಿದರು. ಎಂಟನೇ ತರಗತಿಯಲ್ಲಿ ಹಳೆ ಮೈಸೂರಿನ ಕಡೆಯ ನಿವೃತ್ತ ಶಿಕ್ಷಕರು ಕನ್ನಡ ಎರಡನೆ ಭಾಷೆಯಾಗಿ ಬೋಧಿಸುತ್ತಿದ್ದರು. ಎಂಟನೇ ವರ್ಗದಲ್ಲಿ ಉತ್ತೀರ್ಣರಾದ ನಂತರ ಒಂಭತ್ತನೇ ಇಯತ್ತೆ ಓದಲು ಮತ್ತೆ ಚಿಂಚೋಳಿಗೆ ಬರಬೇಕಾಯಿತು. ಒಂಭತ್ತನೇ ತರಗತಿಯಲ್ಲಿ ಪಾಸಾದ ನಂತರ ಪಂಚಾಕ್ಷರಿಯವರಿಗೆ ವಿಷಮಶೀತ ಜ್ವರ ಬಂದು ಐದಾರು ತಿಂಗಳುಗಳ ಕಾಲ ಹಾಸಿಗೆ ಹಿಡಿಯಬೇಕಾಯಿತು. ಆ ಸಮಯದಲ್ಲಿ ಚಿಂಚೋಳಿಯಲ್ಲಿ ಯೋಗ್ಯ ಚಿಕಿತ್ಸಕರಿಲ್ಲದ ಕಾರಣ ಇವರ ತಂದೆಯವರು ತಾಂಡೂರಿಗೆ ಕರೆದೊಯ್ದಿದ್ದರು. ಇವರ ಚಿಕ್ಕಮ್ಮನವರೆ ಉಪಚರಿಸಿದ್ದರು. ವೈದ್ಯರು ಮನೆಗೆ ಬಂದು ಔಷದೋಪಚಾರ ಮಾಡುತ್ತಿದ್ದರು. ಅವರ ತಂದೆಯವರು ಇವರನ್ನು ಬದುಕಿಸುವ ಸಲುವಾಗಿ ಸಾಲಗಾರರಾಗಿದ್ದರು. ಬಡ್ಡಿಸಹಿತ ಹಣ ತಂದು ಒಂದಕ್ಕೆ ಹತ್ತು ಪಟ್ಟು ಹಣ ತೆತ್ತಿದ್ದರು. ಇವರಿಗೆ ಮರುಜೀವ ತಂದುಕೊಟ್ಟದ್ದಕ್ಕಾಗಿ ತಂದೆಯವರು ಸದಾ ಕಣ್ಮುಂದೆ ಕಟ್ಟಿದಂತೆ ಇರುತ್ತಾರೆಂದು ಹೇಳುತ್ತಾರೆ. ಈ ಕಾರಣದಿಂದ ಒಂದು ವರ್ಷ ಅಭ್ಯಾಸ ನಿಂತು ಹೋಯಿತು.

ಚಿಂಚೋಳಿಯಲ್ಲಿ ಶಿಕ್ಷಣ ಉತ್ತಮವಾಗಿಲ್ಲದ ಕಾರಣ ಮುಂದಿನ ಅಭ್ಯಾಸವಾದ ೧೦ನೇ ತರಗತಿಗೆ ಪ್ರವೇಶ ಪಡೆಯಲು ೧೯೫೭ ರಲ್ಲಿ ಸ್ನೇಹಿತರಾದ ಬಸವಣಪ್ಪ ಕಲ್ಯಾಣಿ ಅವರೊಂದಿಗೆ ಬೀದರಕ್ಕೆ ಬಂದರು. ಊರು ಬಿಟ್ಟು ಬರುವಾಗ ಮನೆಯಲ್ಲಿ ವಿರೋಧಿಸುತ್ತಿದ್ದರು. ಕಾರಣ ಆರೋಗ್ಯ ಸರಿ ಇರಲಿಲ್ಲ. ಅಲ್ಲದೆ ಹಣದ ಅಡಚಣೆ ಬೇರೆ ಆದರೆ ಇವರ ಧೃಢ ನಿಶ್ಚಯದ ಮುಂದೆ ಅವರ ಆಟ ನಡೆಯಲಿಲ್ಲ. ಎಂತಹ ಕಷ್ಟ ಬಂದರೂ ಅವುಗಳನ್ನು ಎದುರಿಸಬೇಕು. ಸ್ವಾವಲಂಬಿಯಾಗಿ ಅಭ್ಯಾಸ ಮಾಡಬೇಕು ಎಂಬ ಛಲ ತೊಟ್ಟಿದ್ದರು. ೧೯೫೭ ರಲ್ಲಿ ಸರಕಾರಿ ಪ್ರೌಢ ಶಾಲೆಯಲ್ಲಿ ೧೦ನೇ ತರಗತಿಗೆ ಕನ್ನಡ ಮಾಧ್ಯಮದಲ್ಲಿ ಪ್ರವೇಶ ಪಡೆದರು.

ಶ್ರೀ ಪಂಚಾಕ್ಷರಿಯವರಿಗೆ ವಿಶ್ವನಾಥ ಪಾಟೀಲರ ನಿಲಂಗಾ ಎಂಬುವವರಲ್ಲಿ ಆಶ್ರಯ ದೊರಕಿತು. ಆಯುರ್ವೇದದ ಡಾಕ್ಟರ್ ರೇವಣಸಿದ್ದಯ್ಯ ಸ್ವಾಮಿಯವರೆ ಇವರ ಪರಿಚಯ ಮಾಡಿಕೊಟ್ಟಿದ್ದರು. ಏಕಾಂಗಿಯಾದ ಅವರಿಗೆ ಅಡುಗೆ ಮಾಡುವುದಕ್ಕಾಗಿ ಉಳಿದರು. ಜೊತೆಗಾರ ಬಸವಣಪ್ಪ ಕಲ್ಯಾಣಿ ಖೇಣಿಯವರ ಮನೆಯಲ್ಲಿ ಮಕ್ಕಳಿಗೆ ಪಾಠ ಹೇಳುವ ಕಾಯಕ ಮಾಡುತ್ತಿದ್ದರು ಎಂದು ಶ್ರೀಯುತರು ಹೇಳುತ್ತಾರೆ. ಇನ್ನು ಎರಡ್ಮೂರು ತಿಂಗಳು ಪರೀಕ್ಷೆ ಸಮೀಪಿಸುತ್ತಿರುವಾಗ ಅವರ ತಂದೆಯವರು ಬೀದರಕ್ಕೆ ಬಂದು ಖಾನಾವಳಿಯಲ್ಲಿ ಊಟ ಮಾಡುವ ವ್ಯವಸ್ಥೆ ಮಾಡಿದರು. ಇದರಿಂದ ಅವರಿಗೆ ಮತ್ತೆ ಸಾಲದ ಕಷ್ಟ ಅನುಭವಿಸಬೇಕಾಯಿತು.

ವಿಶ್ವನಾಥ ಪಾಟೀಲರು ರುದ್ರಪ್ಪ ವಕೀಲರ ಮನೆಯಲ್ಲಿ ಬಾಡಿಗೆಗೆ ಇದ್ದರು. ಅಲ್ಲಿಯೇ ಫಡನಿಸ್ ಎಂಬ ಶಿಕ್ಷಕರು ಇರುತ್ತಿದ್ದರು. ಅವರ ಪತ್ನಿಯ ಹೆಸರು ಲಿಲಾ ಫಡನಿಸ್ ಇವರು ಸರ್ಕಾರಿ ಬಾಲಕಿಯರ ಪ್ರೌಢ ಶಾಲೆಯಲ್ಲಿ ಶಿಕ್ಷಕಿಯರಾಗಿದ್ದರು. ಈ ದಂಪತಿಗಳು ಕನ್ನಡಾಭಿಮಾನಿಗಳು, ಸಾಹಿತ್ಯ, ಸಂಗೀತ,

ಕಲೆಯಲ್ಲಿ ಆಸಕ್ತಿಯುಳ್ಳವರಾಗಿದ್ದರು. ಇಂತಹವರ ಸಂಗ ನನಗೆ ದೊರೆತದ್ದು ಪುಣ್ಯ ಎಂದು ಹೇಳುತ್ತಾರೆ. ಕನ್ನಡ ಬೋಧಿಸುವ ಶಿಕ್ಷಕರೆಂದರೆ ದಿಗ್ಗಾವಿ .ಕನ್ನಡ ಅವಸಾನಗೊಂಡ ಈ ನಗರದಲ್ಲಿ ಇವರು ಕನ್ನಡಿಗರಲ್ಲಿ ಕನ್ನಡತನ ಜಾಗೃತಗೊಳಿಸುತ್ತಿದ್ದರು. ಸಂಜೆ ಹೊತ್ತಿಗೆ ಮನೆ ಮನೆಗೆ ಹೋಗಿ ಮಕ್ಕಳಿಗೆ ಕನ್ನಡ ಶಾಲೆಗಳಿಗೆ ಕಳಿಸಬೇಕೆಂದು ಬೋಧಿಸುತ್ತಿದ್ದರು. ಕರ್ನಾಟಕವು ಏಕೀಕರಣವಾಗುವುದಕ್ಕಿಂತ ಪೂರ್ವದಲ್ಲಿ ಅಂದರೆ ೧೯೫೩ ರಲ್ಲಿ ಇವರು ಇನ್ನಿತರ ಮುಖಂಡರೊಂದಿಗೆ ಊರೂರಿಗೆ ಹೋಗಿ ಕರ್ನಾಟಕ ರಾಜ್ಯದಲ್ಲಿ ಸೇರಬೇಕೆಂದು ಉಪನ್ಯಾಸ ಮಾಡುತ್ತಿದ್ದರು. ಇವರಲ್ಲದೆ ಮೀನಕೇರಿಯ ವಿಶ್ವನಾಥ ಪಾಟೀಲರು, ಚಂದ್ರಶೇಖರ ಮುತ್ತಂಗಿ, ಫಡನಿಸ್, ಕಸ್ತೂರಿ, ಚನ್ನಬಸವ ಪಟ್ಟದ್ದೇವರು ಮುಂತಾದವರು ಈ ಭಾಗ ಕರ್ನಾಟಕದಲ್ಲಿ ಸೇರುವಂತೆ ಮಾಡುವಲ್ಲಿ ಹೆಣಗಿದ್ದಾರೆ. ಈ ಸಮಾಚಾರಗಳನ್ನೆಲ್ಲ ವಿದ್ಯಾರ್ಥಿಯಾಗಿದ್ದಾಗ ಪಂಚಾಕ್ಷರಿಯವರ ಮೇಲೆ ಕನ್ನಡದ ಸೇವೆ ಮಾಡುವಂತೆ ಮುಂದೆ ಪ್ರೇರೆಪಿಸಿದವು.

ಹತ್ತನೇ ವರ್ಗದಲ್ಲಿ ಓದುವಾಗ ಬೀದರನ ಹೃದಯ ಭಾಗದಲ್ಲಿರುವ ಕರ್ನಾಟಕ ವಾಚನಾಲಯಕ್ಕೆ ಹೋಗುತ್ತಿದ್ದರು. ಅಲ್ಲಿಗೆ ಬರುತ್ತಿದ್ದ ನಾನಾ ತರಹದ ಪತ್ರಿಕೆಗಳು ಮತ್ತು ಪುಸ್ತಕಗಳನ್ನು ಓದುವ ಅವಕಾಶ ದೊರೆಯಿತು. ಈ ವಾಚನಾಲಯವು ಈವರ ಜ್ಞಾನ ಭಂಡಾರ ಹೆಚ್ಚಿಸುವಲ್ಲಿ ಹಾಗೂ ಚಟುವಟಿಕೆಗಳು ಸಾಮಾನ್ಯ ಜ್ಞಾನ ಹೆಚ್ಚಾಗಲು ಕಾರಣವಾದವು.

ಇದೇ ಸಂದರ್ಭದಲ್ಲಿ ದೇಶದ ಪ್ರಧಾನಿಯಾಗಿರುವ ಪಂಡಿತ ಜವಾಹರಲಾಲ ನೆಹರು ಹಾಗೂ ಶಿಕ್ಷಣ ಮಂತ್ರಿಗಳಾದ ಅಬ್ದುಲ ಕಲಾಮ ಅಜಾದ ಬೀದರ ನಗರಕ್ಕೆ ಆಗಮಿಸಿದ್ದರು. ಇವರನ್ನು ಕಾಣಲು ಬೀದರ ಜಿಲ್ಲೆ ಜನತೆ ನಗರದಲ್ಲಿ ತುಂಬಿ ತುಳುಕುತ್ತಿತ್ತು. ಇಂತಹ ದೃಶ್ಯ ಮತ್ತೆ ಕಾಣಲು ಸಾಧ್ಯವಿಲ್ಲ ಎನ್ನುತ್ತಾರೆ. ಇಂತಹ ಸುಂದರವಾದ ಸಮಾರಂಭವನ್ನು ಕಂಡು ದಿಗ್ಭ್ರಮೆಗೊಂಡ ಅವರು ನೆಹರುಜಿಯವರ ಮೇಲೆ ಒಂದು ಕವನ ರಚಿಸಿದರು. ಅದರ ಎರಡು ಸಾಲುಗಳು ಈ ಕೆಳಗಿನಂತೆ ನೋಡಬಹುದು.

ಜಪತವಿಲ್ಲದೆ ಪರಮಾತ್ಮನನ್ನು
ಕಂಡೆನು ನಾ ಬೀದರನಲ್ಲಿ.

ಹತ್ತನೇ ವರ್ಗದಲ್ಲಿ ಅಭ್ಯಾಸ ಮಾಡುತ್ತಿರುವಾಗ ಇವರು ಪ್ರಜಾ ರಾಜ್ಯೋತ್ಸವದ ಸಂದರ್ಭದಲ್ಲಿ 'ಶಾಲೆಯಲ್ಲಿ ಮೊಟ್ಟ ಮೊದಲ ಸಲ ಕನ್ನಡದಲ್ಲಿ ಕವನ ವಾಚನ ಮಾಡಿದವರು ನಾನೆ' ಎಂದು ಹೇಳಿಕೊಳ್ಳುತ್ತಾರೆ. ಸಾರ್ವಜನಿಕ ಸಮಾರಂಭದಲ್ಲಿ ಮರಾಠಿ ಹಾಗೂ ಉರ್ದು ಭಾಷಿಕರೇ ಶೋಭಿಸುತ್ತಿದ್ದರು. ಇವರ ಕನ್ನಡ ಕವನ ವಾಚನದಿಂದ ಕನ್ನಡ ವಿದ್ಯಾರ್ಥಿಗಳಲ್ಲಿ ಹಾಗೂ ಶಿಕ್ಷಕರಿಗೆ ಹರ್ಷವನ್ನುಂಟು ಮಾಡಿತು. ಈ ರೀತಿ ಇವರ ಹೈಸ್ಕೂಲ ವಿದ್ಯಾಭ್ಯಾಸ ೧೯೫೩ ರಲ್ಲಿ ಪೂರ್ಣಗೊಂಡಿತು.

**ಕೌಟುಂಬಿಕ ಜೀವನ :**

ಪುಣ್ಯಶೆಟ್ಟಿ ಮನೆತನದ ಶ್ರೀ ಶಿವರುದ್ರಪ್ಪಾ ಮತ್ತು ನೀಲಮ್ಮನವರ ಎಂಟು ಜನ ಮಕ್ಕಳಲ್ಲಿ ಎರಡನೆಯವರಾಗಿ ಜನಿಸಿದ್ದು ಶ್ರೀ ಪಂಚಾಕ್ಷರಿಯವರು. ಇವರ ಕುಟುಂಬವು ತುಂಬಾ ಸಂತೋಷದಿಂದ ಕೂಡಿತ್ತು.

ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ
ಸತಿಪತಿಗಳೊಂದಾಗದ ಭಕ್ತಿ ಅಮೃತದೊಳು ವಿಷವ ಬೆರೆಸಿದಂತೆ

ಎಂದು ದೇವರ ದಾಸಿಮಯ್ಯ ಶರಣರು ದಾಂಪತ್ಯ ಹೇಗಿರಬೇಕೆಂಬುದರ ಬಗ್ಗೆ ವ್ಯಾಖ್ಯಾನಿಸಿದ್ದಾರೆ. ವಿವಾಹವು ಬದುಕಿನ ಒಂದು ಅಂಗ. ವಯಸ್ಕರಾದ ಹೆಣ್ಣು-ಗಂಡುಗಳು ಮದುವೆಯಾಗುವ ಪದ್ಧತಿ ಹಿಂದಿನಿಂದಲೂ ನಡೆದುಕೊಂಡು ಬಂದಿದೆ.

ಶ್ರೀ ಪಂಚಾಕ್ಷರಿಯವರಿಗೆ ಸುಮಾರು ೨೪ ವರ್ಷ ತುಂಬಿದ ಮೇಲೆ ಮದುವೆಯಾಗಬೇಕೆಂದು ಇಚ್ಛೆಯಾಗಿತ್ತು. ಬಾಲ್ಯದಲ್ಲಿರುವಾಗಲೆ ಅವರು ತಮ್ಮ ಹಿರಿಯರೊಡನೆ ಮಾತಾಡುವಾಗ ತಾವು ಒರ್ವ ಅಂಗಹೀನಳನ್ನೇ ಮದುವೆಯಾಗಬೇಕೆಂದು ಗುರಿ ಇಟ್ಟುಕೊಂಡಿದ್ದರು. ಇವರ ಬಾಲಭಾಷೆಯನ್ನು ಕೇಳಿ ಎಲ್ಲರೂ ಹಾಸ್ಯ ಮಾಡುತ್ತಿದ್ದರು. ಈ ವಿಚಾರವು ಅವರಿಗೆ ಹೊಳೆದದ್ದು ಊರಿನಲ್ಲಿರುವ ಒಬ್ಬ ಅಂಧ ಹುಡುಗಿಯನ್ನು ಕಂಡಾಗ. ಇಂತಹವರ ಭವಿಷ್ಯದ ಬಗ್ಗೆ ಇವರಿಗೆ ಚಿಂತೆ ಕಾಡುತ್ತಿತ್ತು.

ಇವರು ಬೀದರನಲ್ಲಿ ಶಿಕ್ಷಣ ತರಬೇತಿ ಶಾಲೆಯಲ್ಲಿ ಅಭ್ಯಾಸ ಮಾಡುತ್ತಿರುವಾಗ ಲಾಡಗೇರಿಯಲ್ಲಿ ಒಂದು ದುರ್ಘಟನೆ ಜರುಗಿತು. ಲಾಡಗೇರಿಯ ಗೌರವಸ್ಥ ಮನೆತನ ಕರ್ಪೂರದವರದಾಗಿತ್ತು. ದಿವಂಗತ ಮಾಣಿಕಪ್ಪಾ ಕರ್ಪೂರ ಇವರು ಬೀದರ ಜಿಲ್ಲೆಯಲ್ಲಿಯೇ ಪ್ರಖ್ಯಾತ ವ್ಯಕ್ತಿಗಳಾಗಿದ್ದರು. ಇವರ ಮರಣದ ನಂತರ ಇವರ ಮಕ್ಕಳ ಜವಾಬ್ದಾರಿ ಇವರ ತಮ್ಮನಾದ ನಾಗಶೆಟ್ಟಿ ಕರ್ಪೂರ ಅವರ ಮೇಲೆ ಬಿತ್ತು. ಇವರು ಪಿ.ಡಬ್ಲ್ಯೂ.ಡಿ ಇಲಾಖೆಯಲ್ಲಿ ಎಂಜಿನಿಯರ್ ಆಗಿದ್ದರು. ಮಾಣಿಕಪ್ಪಾ ಕರ್ಪೂರ ರವರ ಹಿರಿಯ ಮಗಳು ಸಂಗಮ್ಮ ಎಂಟನೇ ತರಗತಿಯಲ್ಲಿ ಸರ್ಕಾರಿ ಮಹಿಳಾ ಪ್ರೌಢ ಶಾಲೆಯಲ್ಲಿ ಅಭ್ಯಾಸ ಮಾಡುತ್ತಿರುವಾಗ ಇವಳ ರೂಪ ಲಾವಣ್ಯ ಕಂಡು ಯುವಕನೊಬ್ಬನು ವಿವಾಹವಾಗಬೇಕೆಂಬ ಇಚ್ಛೆಯುಳ್ಳವನಾಗಿದ್ದನು. ಈ ಸಂಬಂಧ ನಾಗಶೆಟ್ಟಿಯವರಿಗೆ ಸರಿ ಎನಿಸಲಿಲ್ಲ. ಮಹಾರಾಷ್ಟ್ರದ ಚಾಕೂರನವರು ಇವಳಿಗೆ ನೋಡಿದ್ದರು. ವಿವಾಹ ನಿಶ್ಚಯವಾಗುವುದರಲ್ಲಿತ್ತು. ಈ ವಿಷಯ ತಿಳಿದ ಆ ಯುವಕನು ಅವರಿಗೆ ಇಲ್ಲ ಸಲ್ಲದ ಪತ್ರ ಬರೆದು ವಿವಾಹಕ್ಕೆ ವಿಘ್ನ ತಂದನು. ಇದರಿಂದ ನಾಗಶೆಟ್ಟಿ ಕರ್ಪೂರ ಅವರು ಬಹಳ ನೊಂದುಕೊಂಡರು. ಒಂದು ದಿವಸ ಆ ಯುವಕನು ಎಲ್ಲರು ರಾತ್ರಿ ಮಲಗಿರುವಾಗ ಬಂದು ಸಂಗಮ್ಮಳನ್ನು ಕೊಲ್ಲಬೇಕೆಂದು ಮಚ್ಚನಿಂದ ಹೊಡೆಯುವಷ್ಟರಲ್ಲಿ ಅವಳು ಎಚ್ಚರಗೊಂಡು ಕೈ ಅಡ್ಡ ತಂದಳು. ಎಡಗೈನ ಮುಂಗೈ ಕಡಿದು ಕೆಳಗೆ ಬಿತ್ತು. ಹೀಗೆ ಆ ಯುವಕನು ತಾಯಿ ಮಗಳನ್ನು ಮನಬಂದಂತೆ ಹೊಡೆದಿದ್ದನು. ಅನೇಕ ದಿನಗಳ ವರೆಗೆ ಆಸ್ಪತ್ರೆಯಲ್ಲಿ ಮೂರ್ಛಿತಳಾಗಿ ಇದ್ದಳು. ಐದಾರು ತಿಂಗಳ ನಂತರ ಗುಣಹೊಂದಿ ಮನೆಗೆ ಬಂದರು. ಇವಳ ಈ ಘಟನೆ ಬೀದರ ನಗರವನ್ನೇ ನಡುಗಿಸಿತ್ತು.

ಈ ಘಟನೆ ಶ್ರೀ ಪಂಚಾಕ್ಷರಿಯವರು ತರಬೇತಿ ಪಡೆಯುತ್ತಿರುವಾಗಲೇ ತಿಳಿದುಕೊಂಡಿದ್ದರು. ಇಂತಹವಳನ್ನು ಮದುವೆಯಾಗಬೇಕೆಂದು ಮನದಲ್ಲಿ ಅಂದು ಕೊಂಡಿದ್ದರು. ಆಗಾಗ ಸ್ನೇಹಿತರಾದ ಬಸವಣ್ಣಪ್ಪ ಹಾಗೂ ಅಪ್ಪಾರಾಯರೊಡನೆ ಚರ್ಚಿಸುತ್ತಿದ್ದರು. ಆದರೆ ಅವರು ಸಹಕರಿಸುತ್ತಿಲ್ಲಿಲ್ಲ ಎಂದು ಹೇಳುತ್ತಾರೆ.

ಸುಮಾರು ಎರಡು ವರ್ಷಗಳ ನಂತರ ಮನ್ನಳ್ಳಿಯಲ್ಲಿ ಸರ್ಕಾರಿ ಮಾಧ್ಯಮಿಕ ಶಾಲೆಯಲ್ಲಿ ಕೆಲಸ

ಮಾಡುತ್ತಿರುವಾಗ ಮತ್ತೆ ಈ ಹುಡುಗಿಯ ವಿಷಯ ನೆನಪಾಗಿ ಕಾಡತೊಡಗಿತು. ಲಾಡಗೇರಿಯ ವೀರಪ್ಪ ವಡ್ಡಿ ಎಂಬುವವರುಮನ್ನಳ್ಳಿಯಲ್ಲಿ ಮುಖ್ಯೋಪಾಧ್ಯಾಯರಾಗಿದ್ದರು. ಇವರೊಡನೆ ಆ ವಿಷಯ ಮಾತನಾಡಿದರು. ಇವರು ಲಾಡಗೇರಿ ಕರ್ಪೂರ ಮನೆತನದ ಬಗ್ಗೆ, ಹುಡುಗಿಯ ಸ್ವಭಾವದ ಬಗ್ಗೆ ತಿಳಿದವರು ಆಗಿದ್ದರು. ಹಿಂದೆ ನಡೆದ ಘಟನೆ, ಅವರ ತಂದೆಯ ವ್ಯಕ್ತಿತ್ವತಿಳಿದವರಾಗಿದ್ದರು. ಸುಮಾರು ೧೯೫೮ ರ ಆಗಸ್ಟತಿಂಗಳ ಮೊದಲ ವಾರದಲ್ಲಿ ಶರಣಪ್ಪ ಮಾತನಕೇರಿ ಅವರ ಒಡಗೂಡಿ ಲಾಡಗೇರಿಗೆ ಹುಡುಗಿಯನ್ನು ನೋಡಲು ಹೋಗಿದ್ದರು. ಅಲ್ಲಿ ಈ ಕಾರ್ಯದಲ್ಲಿ ಲಾಡಗೇರಿಯ ಹಿರೇಮಠದ ಮರಿಸ್ವಾಮಿಗಳು ಸಹಕರಿಸಿದರು.

ನಾಗಶೆಟ್ಟಿ ಕರ್ಪೂರರವರು ಪಂಚಾಕ್ಷರಿಯವರ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಬಲ್ಲವರಾಗಿದ್ದರು. ಲಗ್ನ ನಿಶ್ಚಯವಾಯಿತು. ಶ್ರವಣ ಮಾಸದ ಮಳೆಗಾಲದಲ್ಲಿ ಆಗಸ್ಟ ೨೪-೧೯೫೮ ರಂದು ವಿವಾಹ ಮಾಡಿಕೊಟ್ಟರು. ಈ ರೀತಿ ಪುಣ್ಯಶೆಟ್ಟಿಯವರು ಕೌಟುಂಬಿಕ ಜೀವನದಲ್ಲಿ ಪಾದಾರ್ಪಣೆ ಮಾಡಿದರು.

ಮುಂದೆ ಇವರಿಗೆ ನಾಲ್ಕು ಜನ ಗಂಡು ಮಕ್ಕಳು ಜನಿಸಿದರು. ಅವರಲ್ಲಿ ಹಿರಿಯರು ಭರತ. ಇವರು ಎಲೆಕ್ಟ್ರಾನಿಕ ಅಂಗಡಿಯನ್ನು ಇಟ್ಟುಕೊಂಡಿದ್ದಾರೆ. ಎರಡನೆಯವರಾದ ದಿವಂಗತ ಸಂಪತ್ ಐನೊಲಿಯಲ್ಲಿ ಕೃಷಿ ಕಾಯಕ ಕೈಗೊಂಡಿದ್ದರು. ಇವರು ಇತ್ತೀಚೆಗೆ ಮರಣವನ್ನಪ್ಪಿದ್ದಾರೆ. ಮೂರನೆಯವರಾದ ರವಿನಂದನ ಸಿವಿಲ್ ಇಂಜಿನಿಯರ್ ಆಗಿದ್ದಾರೆ. ನಾಲ್ಕನೆಯವರಾದ ಶರಣನಂದನ ಸಿಂಗಾಪೂರದಲ್ಲಿ ಸಾಫ್ಟವೇರ್ ಇಂಜಿನಿಯರ್ ಆಗಿದ್ದಾರೆ. ಒಬ್ಬಳು ಮಗಳು ಅಕ್ಕ ಮಹಾದೇವಿ. ಇವರು ಆಂಧ್ರಪ್ರದೇಶದ ಸದಾಶಿವಪೇಟ ಪ್ರೌಢ ಶಾಲೆಯಲ್ಲಿ ಶಿಕ್ಷಕಿಯಾಗಿದ್ದಾರೆ. ಇವರ ಪತಿ ಶಿವಶರಣ ಮೆಕಾನಿಕಲ್ ಇಂಜಿನಿಯರ್ ಆಗಿದ್ದಾರೆ. ಇವರ ಕುಟುಂಬದಲ್ಲಿ ಮಕ್ಕಳು, ಮೊಮ್ಮಕ್ಕಳಾದ ಶಿಲ್ಪಾ, ಶ್ವೇತಾ, ಪೂಜಾ, ಸಂಗಮೇಶ, ಪುನಿತ, ಸುಮಿತ, ರಶ್ಮಿ, ರತಿಕಾ, ಶರಣಬಸವ, ಶಾಸ್ವತ, ಅನುಶಾ, ಆಕಾಶ, ಮತ್ತುಮರಿಮಕ್ಕಳೊಂದಿಗೆ ಕುಂಬಾರಗೇರಿಯಲ್ಲಿ ಇವರು ವೃದ್ಯಾಪ್ಯ ಜೀವನವನ್ನು ಸುಖ ಸಂತೋಷದಿಂದ ಕಳೆಯುತ್ತಿದ್ದಾರೆ.

**ಹವ್ಯಾಸಗಳು :**

ಹವ್ಯಾಸವೆಂದರೆ ಚಟ. ಹವ್ಯಾಸದಲ್ಲಿ ಎರಡು ವಿಧ. (ಒಂದು ಒಳ್ಳೆಯ ಹವ್ಯಾಸಗಳು) ಉತ್ತಮ ಹವ್ಯಾಸಗಳು ಮನುಷ್ಯನಿಗೆ ಸನ್ಮಾರ್ಗಕ್ಕೆ ಒಯ್ಯುತ್ತವೆ. ಮತ್ತು ಕೆಟ್ಟ ಹವ್ಯಾಸಗಳು ಮನುಷ್ಯನಿಗೆ ದುರ್ಮಾರ್ಗಕ್ಕೆ ಒಯ್ದು ನಾಶಗೊಳಿಸುತ್ತವೆ. ವಿದ್ಯಾರ್ಥಿ ಜೀವನದಲ್ಲಿ ಶ್ರೀ ಪಂಚಾಕ್ಷರಿಯವರಿಗೆ ಅಂತಹ ಒಳ್ಳೆಯ ಹವ್ಯಾಸಗಳಿರಲಿಲ್ಲ, ಹೆಚ್ಚಾಗಿ ಆಟ ಪಾಟಗಳಲ್ಲಿ ಕಳೆಯುತ್ತಿದ್ದರು. ಅವರಿಗೆ ಉತ್ತಮರ ಸಹವಾಸ ದೊರೆಯಲಿಲ್ಲ. ಬೆಳೆಯುತ್ತ ಹೋದಂತೆ ಸಜ್ಜನರ ಸಹವಾಸ ದೊರಕಿತು. ಬೆಟಗೇರಿ ಕೃಷ್ಣ ಶರ್ಮ, ಪಿ.ಎಂ.ಗಲಗಲಿ, ದ.ರಾ.ಬೇಂದ್ರೆ, ವಸಂತ ಕುಷ್ಟಗಿ, ಹಣಮಂತರಾವ ಪಾಟೀಲ, ವೀರೇಂದ್ರ ಸಿಂಪಿ, ಸಿಂಪಿ ಲಿಂಗಣ್ಣ ಮುಂತಾದ ಸಜ್ಜನರ ಸಹವಾಸದಿಂದ ಇವರ ಜೀವನ ಮಾರ್ಪಾಟಾಗಿದೆ. ಇದರಿಂದ ಸಾಹಿತ್ಯ ಓದುವ ಹವ್ಯಾಸ ಬೆಳೆಯಿತು. ಇವರಿಗೆ ಯಾವ ಕೆಟ್ಟ ಚಟಗಳಿಲ್ಲ, ಧೂಮಪಾನ, ಚಹಾ, ಅಡಕೆ

ಮುಂತಾದವುಗಳಿಂದ ದೂರ ಉಳಿದಿದ್ದಾರೆ.

ಒಂದು ದಿನ ಊಟವಿಲ್ಲದಿದ್ದರೂ ಚಿಂತೆಯಿಲ್ಲ ಶರಣರ ವಚನಗಳು ಓದದಿದ್ದರೆ ಅವರ ಮನಸ್ಸು ಚಂಚಲವಾಗುತ್ತದೆ. ಯಾವಾಗಲೂ ಸಜ್ಜನರ ಸಹವಾಸದಲ್ಲಿ ಕಾಲ ಕಳೆಯಬೇಕೆನ್ನುತ್ತಾರೆ. ಜನರಿಗೆ ಉತ್ತಮ ಮಾರ್ಗದಲ್ಲಿ ನಡೆಯಲು ಪ್ರೇರೇಪಿಸುತ್ತಾರೆ. ಶರಣರ ತತ್ವಗಳನ್ನು ಬೀರುವ ಕೆಲಸ ಅವರ ಸಂಗಡಿಗರೊಂದಿಗೆ ಸುತ್ತಮುತ್ತಲಿನ ಜನರಲ್ಲಿ ಹರಡುವಂತೆ ಮಾಡುತ್ತಾರೆ. ಕೆಟ್ಟ ಕೆಲಸಗಳಿಂದ ದೂರ ಉಳಿದು ಜನಹಿತ ಕಾರ್ಯದಲ್ಲಿ ತೊಡಗುವುದೇ ಇವರ ಹವ್ಯಾಸವಾಗಿದೆ. ರೇಡಿಯೋ ಕೇಳುವುದು, ದೂರದರ್ಶನದಲ್ಲಿ ಅಮೃತ ವಚನ ಹಾಗೂ ಬೆಳಗು ಕಾರ್ಯಕ್ರಮ, ಆಸ್ಥಾದಲ್ಲಿ ರಾಮದೇವ ಮಹಾರಾಜರ ಯೋಗ ನೋಡುವ ಹಾಗೂ ಪ್ರತಿದಿನ ಯೋಗ ಮಾಡುವ ರೂಢಿ ಇಟ್ಟುಕೊಂಡಿದ್ದಾರೆ. ಪ್ರತಿದಿನ ೨-೩ ಕಿ.ಮೀ. ವಾಕಿಂಗ್ ಮಾಡುವ ರೂಢಿ ಇದೆ. ಇದರ ಕಾರಣ ಇವರು ತಮ್ಮ ೭೫ ವರ್ಷದ ವೃಧಾಪ್ಯದಲ್ಲಿಯೂ ಯುವಕರ ಉತ್ಸಾಹವು ಅವರಲ್ಲಿ ಇದೆ.

**ವೃತ್ತಿ ಜೀವನ :**

ಅಂದಿನ ಕಾಲಮಾನದಲ್ಲಿ ಹಳ್ಳಿಗಳಲ್ಲಿ ಶಾಲೆಗಳೇ ಇರಲಿಲ್ಲ. ನಿಜಾಮ ಆಡಳಿತದಲ್ಲಿ ಜನರಿಗೆ ತಿಳುವಳಿಕೆಯಾಗಬಾರದೆಂಬುದೆ ಅಂದಿನ ಆಳರಸರ ಉದ್ದೇಶವಾಗಿತ್ತು. ದೇಶ ಸ್ವತಂತ್ರವಾದ ಬಳಿಕ (೧೯೪೭) ಪ್ರಜಾರಾಜ್ಯ ಉದಯಿಸಿತು. ಪ್ರಜೆಗಳ ಹಿತವೇ ದೇಶದ ಹಿತ ಎಂದು ಬಗೆದ ಸರಕಾರವು ಎಲ್ಲೆಡೆ ಕನ್ನಡ ಶಾಲೆಗಳನ್ನು ಪ್ರಾರಂಭ ಮಾಡಬೇಕೆಂದು ನಿಶ್ಚಯಿಸಿತು. ಆದರೆ, ಕನ್ನಡ ಬೋಧಿಸುವ ಶಿಕ್ಷಕರ ಕೊರತೆ ಇತ್ತು. ಇದಕ್ಕಾಗಿ ಬಾಂಬೆ ಕರ್ನಾಟಕ ಭಾಗದಿಂದ ಕನ್ನಡ ಬಲ್ಲ ಶಿಕ್ಷಕರನ್ನು ಕರೆಯಿಸಿಕೊಂಡರು. ಈ ವಿಷಯದಲ್ಲಿ ಜಯದೇವಿ ತಾಯಿ ಲಿಗಾಡೆಯವರು ಕನ್ನಡ ಬಲ್ಲ ಶಿಕ್ಷಕರಿಗೆ ತಮ್ಮ ಸ್ವಂತ ಹಣ ಖರ್ಚುಮಾಡಿ ಅವರನ್ನ ಈ ಭಾಗಕ್ಕೆ ಸೇವೆ ಸಲ್ಲಿಸಲು ಕಳುಹಿಸುತ್ತಿದ್ದರು.

ಕನ್ನಡ ಮಾಧ್ಯಮದಲ್ಲಿ ಉತ್ತೀರ್ಣರಾದ ಪ್ರತಿಯೊಬ್ಬರಿಗೆ ಶಿಕ್ಷಕ ಹುದ್ದೆ ಕೊಡಲಾಯಿತು. ಇದರಂತೆ ಶ್ರೀ ಪಂಚಾಕ್ಷರಿಯವರು ಹುಮನಾಬಾದ ಸಮೀಪದ ಧುಮ್ಮನಸೂರಿಗೆ ಶಿಕ್ಷಕರೆಂದು ೧೯೫೩ ರಲ್ಲಿ ನಿಯುಕ್ತರಾದರು. ಈ ಶಾಲೆ ಏಕೋಪಾಧ್ಯಾಯ ಶಾಲೆಯಾಗಿತ್ತು. ಶಾಲೆಯು ನಾವದಗಿ ರೇವಪಯ್ಯನವರ ಚಿಕ್ಕ ಗುಡಿಯೊಂದರಲ್ಲಿತ್ತು. ಅಸ್ಪೃಶ್ಯತೆ ಅಂದಿನ ಕಾಲದಲ್ಲಿ ತಾಂಡವವಾಡುತ್ತಿತ್ತು. ಹರಿಜನ ವಿದ್ಯಾರ್ಥಿಗಳಿಗೆ ಗುಡಿಯ ಹೊರಗೆ ಮತ್ತು ಸವರ್ಣಿಯರಿಗೆ ಗುಡಿಯ  ಒಳಗೆ ಕೂಡಿಸುತ್ತಿದ್ದರು. ಈ ಭೇಧಭಾವವನ್ನು ಅಳಿಸಲು ಶ್ರೀ ಪುಣ್ಯಶೆಟ್ಟಿಯವರು ಎಲ್ಲಾ ವಿದ್ಯಾರ್ಥಿಗಳನ್ನು ಗುಡಿಯೊಳಗೆ ಕೂಡಲು ಅವಕಾಶ ಒದಗಿಸಿದರು. ಗುಡಿಯ ಪೂಜಾರಿಯ ಬೆದರಿಕೆಗೆ ಅಂಜದೆ ಕಾನೂನಿನ ಭಯ ಜನರಲ್ಲಿ ಹುಟ್ಟುವಂತೆ ಈ ರೀತಿ ಅವರು ಶಾಲೆಯಲ್ಲಿ ಸಮಾನತೆ ತಂದು ವಿದ್ಯಾರ್ಥಿಗಳಲ್ಲಿ ಪರಸ್ಪರ ಪ್ರೀತಿ ಹುಟ್ಟುವಂತೆ ಮಾಡಿದರು.

ಕೆಲವು ತಿಂಗಳುಗಳ ಬಳಿಕ ಧುಮ್ಮನಸೂರಿನಿಂದ ೧೯೫೪ ರಲ್ಲಿ ಭಾಲ್ಕಿ ತಾಲೂಕಿನ ತೂಗಾಂವ(ಕಟ್ಟಿ) ಗ್ರಾಮಕ್ಕೆ ವರ್ಗವಾಯಿತು. ಅಲ್ಲಿಯೂ ಕೂಡ ಏಕೋಪಾಧ್ಯಾಯರಾಗಿ ಯಶಸ್ವಿ ಕೆಲಸ

ಮಾಡಿದರು. ಅಲ್ಲಿ ಸಂಗಪ್ಪ ಬಸೆಟ್ಟಿಯವರ ದನದ ಕೊಟ್ಟಿಗೆಯಲ್ಲಿ ಶಾಲೆ ಇತ್ತು. ಅಲ್ಲಿಯು ಧುಮ್ಮನಸೂರಿನಂತೆ ವಿದ್ಯಾರ್ಥಿಗಳಲ್ಲಿ ವರ್ಣ ಭೇಧವಿತ್ತು. ಇದನ್ನ ಕಂಡ ಪಂಚಾಕ್ಷರಿಯವರು ಮತ್ತೆ ಧುಮ್ಮನಸೂರಿನಂತೆ ಆಯಾ ವರ್ಗದ ವಿದ್ಯಾರ್ಥಿಗಳಿಗೆ ಸಮಾನವಾಗಿ ಕೂಡಿಸಲು ಪ್ರಾರಂಭಿಸಿದರು. ಅಲ್ಲಿಯ ಕೆಲವರನ್ನ ಎದುರಿಸಬೇಕಾಯಿತು. ಅವರ ದಿಟ್ಟ ನಿರ್ಧಾರದಿಂದ ಯಾವ ಬದಲಾವಣೆಯು ಆಗಲಿಲ್ಲ. ಇದಲ್ಲದೆ ಅವರು ರಾತ್ರಿ ಎಲ್ಲಾ ಜಾತಿಯ ಹುಡುಗರೊಟ್ಟಿಗೆ ಬಸೆಟ್ಟಿಯ ಬಂಗಲೆಯ ಮೇಲೆ ಇರುತ್ತಿದ್ದರು. ಸಾಯಂಕಾಲ ಪ್ರಾರ್ಥನೆ ಮಾಡಿಸುವುದು, ಪಾಠ ಹೇಳುವುದು ಸಾಗುತಿತ್ತು. ಮುಂಜಾನೆ ವಿದ್ಯಾರ್ಥಿಗಳೊಂದಿಗೆ ಕಾರಂಜಾ ನದಿಯಲ್ಲಿ ಸ್ನಾನ ಮಾಡುವುದು, ವಿದ್ಯಾರ್ಥಿಗಳಿಗೆ ಈಜು ಕಲಿಸುವುದು, ಅಸ್ಪೃಶ್ಯತೆಯ ಭಾವನೆ ಅಳಿಸಲು ಹರಿಜನ ಹುಡುಗರ ಕೈಯಿಂದಲೆ ನೀರು ತರಿಸಿ ಪರಸ್ಪರ ಕುಡಿಸುವುದು. ಮತ್ತು ಸಂಜೆ ಫೂಟ್‌ಬಾಲ ಆಟ ಆಡಿಸುವುದು, ಹರಿಜನರ ಓಣಿಯಲ್ಲಿ ಹೋಗಿ ಜನರಿಗೆ ಸ್ವಚ್ಛತೆಯ ಹಾಗೂ ಶಿಕ್ಷಣದ ಬಗ್ಗೆ ಆಸಕ್ತಿ ಹುಟ್ಟಿಸುವ ಕೆಲಸ ಮಾಡುತ್ತಿದ್ದರು. ಇವರ ಈ ಕಾರ್ಯದಲ್ಲಿ ಸಂಗಪ್ಪ ಬಸೆಟ್ಟಿಯವರು ಇವರಿಗೆ ಅಂದಿನ ಕಾಲದಲ್ಲಿ ನೆರವಾಗಿದ್ದರು. ಅಲ್ಲದೆ ರಾಷ್ಟ್ರೀಯ ಹಬ್ಬಗಳಂದು ಚಿಕ್ಕ ನಾಟಕಗಳನ್ನು ಮಕ್ಕಳಿಂದ ಆಡಿಸಿ ಜನರಿಗೆ ಮನೋರಂಜನೆ ನೀಡುತ್ತಿದ್ದರು. ಇವರ ವರ್ಗಾವಣೆಯ ಸಮಯದಲ್ಲಿ ವಿದ್ಯಾರ್ಥಿಗಳ ಶೋಕ ಹೇಳತೀರದು.

ನಂತರ ಬಸವಕಲ್ಯಾಣದ ಹತ್ತಿರವಿರುವ ಬೇಲೂರಿಗೆ ವರ್ಗವಾಯಿತು. ಅಲ್ಲಿ ಏಕೋಪಾಧ್ಯಾಯ ಇರಲಿಲ್ಲ. ಎಲ್ಲ ಶಿಕ್ಷಕರೊಂದಿಗೆ ಪ್ರೀತಿಯಿಂದ ವ್ಯವಹರಿಸುತ್ತಿದ್ದರು. ಶಿವರಾಂ ಚಿಟಗುಪ್ಪ ಶಿಕ್ಷಕರೊಂದಿಗೆ ಒಂದೇಕಡೆ ಇರುತ್ತಿದ್ದರು. ಶಾಲೆಯು ಊರ ಹೊರಗಿನ ದೇವಾಲಯವೊಂದರ ಹೊರಗೆ ಗಿಡದ ನೆರಳಿನಲ್ಲಿ ಶಾಲೆ ನಡೆಯುತ್ತಿತ್ತು. ಮಕ್ಕಳ ಆಟಪಾಠಗಳಲ್ಲಿ ಆಸಕ್ತಿಯುಳ್ಳ ಇವರಿಬ್ಬರು ಶಿಕ್ಷಕರ ಮಾರ್ಗದರ್ಶನದಿಂದ ಅನೇಕ ವಿದ್ಯಾರ್ಥಿಗಳು ಉನ್ನತ ಪದವಿಗೇರಿದ್ದಾರೆ.

ಅಲ್ಲಿಂದ ಖಟಕ ಚಿಂಚೋಳಿಗೆ ಬಡ್ತಿಯ ಮೇಲೆ ೧೯೫೫ ಕ್ಕೆ ವರ್ಗವಾಯಿತು. ಆಗ ಖಟಕ ಚಿಂಚೋಳಿಯಲ್ಲಿ ನಾಲ್ಕನೇ ತರಗತಿಯವರೆಗೆ ಶಾಲೆ ಇತ್ತು. ಇದು ಕೂಡ ಊರ ಮಧ್ಯದಲ್ಲಿರುವ ದೇವಾಲಯದಲ್ಲಿ ನಡೆಯುತಿತ್ತು. ಶಿಕ್ಷಕರಲ್ಲಿ ಕಲಿಸುವುದರಲ್ಲಿ ಪೈಪೋಟಿ ಇತ್ತು . ವಿದ್ಯಾರ್ಥಿಗಳನ್ನು ಕಲಿಸುವುದರಲ್ಲಿ , ಸಮಯಕ್ಕೆ ಸರಿಯಾಗಿ ಬರುವಲ್ಲಿ, ವಿದ್ಯಾರ್ಥಿಗಳ ಪ್ರೇಮ ಪಡೆಯುವುದರಲ್ಲಿ ನಾ ಮುಂದು ತಾ ಮುಂದು ಎಂಬ ಕುತೂಹಲ ಇರುತಿತ್ತು. ಶಾಲೆಯ ಗಂಟೆ ಬಾರಿಸುವುದು, ಶಾಲೆಯ ಸ್ವಚ್ಛತೆಯ ಕಡೆ ಗಮನ ಕೊಡುವುದು ಸ್ವತಃ ಶಿಕ್ಷಕರೆ ಮಾಡುತ್ತಿದ್ದರು. ರಾತ್ರಿಯ ಸಮಯದಲ್ಲಿ ಶ್ರೀ ಪಂಚಾಕ್ಷರಿಯವರು ಊರ ಹೊರಗಿನ ಹರಿಜನ ಓಣಿಗಳಿಗೆ ಹೋಗಿ ಅವರೊಡನೆ ಪರಸ್ಪರ ಮಾತನಾಡುವುದು, ಸಾಕ್ಷರತೆಯ ಮಹತ್ವವನ್ನು ತಿಳಿಸುವುದು ಮುಂತಾದ ಹವ್ಯಾಸಗಳನ್ನಿಟ್ಟು ಕೊಂಡಿದ್ದರು. ಸಿದ್ರಾಮಪ್ಪ ಹರಿಜನ ಎಂಬ ವ್ಯಕ್ತಿಯು ಓಣಿಯ ಜನರ ಮೇಲೆ ಪ್ರಭಾವ ಬೀರಿದರು. ಅವರು ಹೇಳಿದ್ದು ಅಲ್ಲಿಯ ಜನ ತಪ್ಪದೆ ಪಾಲಿಸುತ್ತಿದ್ದರು. ಅವರ ನೆರವಿನಿಂದ ಹರಿಜನ ಓಣಿಯಲ್ಲಿ 'ಗಾಂಧಿ ಆಶ್ರಮ' ಸ್ಥಾಪಿಸಿದರು. ತಗಡಿನಿಂದ ಆಭಾದಿತವಾದ ಈ ಆಶ್ರಮದಲ್ಲಿ ಅನೇಕ ಜನರಿಗೆ ಕೂಡುವ ವ್ಯವಸ್ಥೆ ಇತ್ತು. ಹಗಲು ಕೆಲಸಮಾಡಿ ರಾತ್ರಿಗೆ ಕಲಿಯಲು ಜನರು ಬರುತ್ತಿದ್ದರು. ಶಿಕ್ಷಿತರಾದ ವಿದ್ಯಾರ್ಥಿಗಳು ನಿರಕ್ಷರಿಗಳಿಗೆ ಪಾಠ ಕಲಿಸುತ್ತಿದ್ದರು. ಅಲ್ಲಿ

ಪ್ರಾರ್ಥನೆ, ಭಜನೆ, ರಾಷ್ಟ್ರೀಯ ಹಬ್ಬಗಳ ಆಚರಣೆ ಆಚರಿಸುತ್ತಿದ್ದರು. ಮುಂದೆ ಬರುಬರುತ್ತ ಶಿಕ್ಷಿತರ ಸಂಖ್ಯೆ ಹೆಚ್ಚತೊಡಗಿತು. ಇಲ್ಲಿ ಸುಮಾರು ಎರಡು ವರ್ಷ ಸೇವೆ ಸಲ್ಲಿಸಿದ್ದರು.

ಇಲ್ಲಿಂದ ಬೀದರ ತಾಲೂಕಿನ ಮನ್ನಳಿಗೆ ವರ್ಗವಾಗಿ ಹೋದರು. ಮನ್ನಳ್ಳಿಯಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಕೆಲಸ ಮಾಡುವ ಅವಕಾಶ ದೊರೆಯಿತು. ಸನ್ಮಿತ್ರರಾದ ಬಸವರಾಜ ಬೆಂಡೆಗುಂಬಳಿ, ಮಾಣಿಕರಾವ ಧನಶ್ರೀ, ಸಿದ್ರಾಮಯ್ಯ ಸ್ವಾಮಿ ಮುಂತಾದ ಆದರ್ಶ ಶಿಕ್ಷಕರ ಸಹವಾಸ ದೊರಕಿತು. ಈ ಗ್ರಾಮದಲ್ಲಿ ಸೇವೆ ಮಾಡುತ್ತಿರುವಾಗಲೆ ಇವರ ವಿವಾಹ ನೆರವೇರಿತು.

ಇದಾದ ನಂತರ ಇವರು ಬೀದರನ ಮಂಗಲಪೇಟ ಶಾಲೆಯಲ್ಲಿ ವರ್ಗವಾಗಿ ಬಂದರು. ಪಟ್ಟಣವಾದ ಕಾರಣ ಇಲ್ಲಿ ಯಾವ ಸಾಮಾಜಿಕ ಸುಧಾರಣೆಯ ಕಾರ್ಯ ಕೈಗೊಳ್ಳದೆ ಮಕ್ಕಳಿಗೆ ಕನ್ನಡ ಓದಿಸುವುದೆ ಇವರ ಕಾರ್ಯವಾಗಿತ್ತು. ಸಾಂಸ್ಕೃತಿಕ ಚಟುವಟಿಕೆಗಳು ಮುಖ್ಯೋಪಾಧ್ಯಾಯರಾದ ಸಿದ್ರಾಮಯ್ಯ ಸ್ವಾಮಿ ಕಮಠಾಣ ಇವರ ನೇತೃತ್ವದಲ್ಲಿ ಬಹಳ ವಿಜ್ರಂಭಣೆಯಿಂದ ಜರುಗುತ್ತಿದ್ದವು. ಇದೊಂದು ಮಾದರಿ ಪಾಠ ಶಾಲೆಯಾಗಿತ್ತು.

ಇಲ್ಲಿಂದ ಭೋವಿಗಲ್ಲಿ ಪ್ರಾಥಮಿಕ ಶಾಲೆಗೆ ವರ್ಗವಾಯಿತು. ಅಲ್ಲಿ ಸಾಂಸ್ಕೃತಿಕ ಚಟುವಟಿಕೆ ಕಾರ್ಯ ಇವರ ನೇತೃತ್ವದಲ್ಲಿಯೇ ನಡೆಯುತ್ತಿದ್ದವು. ವಾರಕ್ಕೊಮ್ಮೆ ವಿದ್ಯಾರ್ಥಿಗಳ ಚರ್ಚಾಕೂಟ ಏರ್ಪಡಿಸುವುದು. ಹಾಡು ಹಾಡಿಸುವುದು, ಅಲ್ಲದೆ ಸಿಂಪಿ ಲಿಂಗಣ್ಣ, ತೀ.ತಾ. ಶರ್ಮ ಮುಂತಾದ ಮಹಾನ ಸಾಹಿತಿಗಳನ್ನು ಬರಮಾಡಿಕೊಂಡು ಮಕ್ಕಳಿಗೆ ಉಪದೇಶ ಕೊಡಿಸುತ್ತಿದ್ದರು. ನೀಲಕಂಠರಾವ ಲಾಡಗೇರಿ, ಬಸವರಾಜ ಮಂಗಲಗಿ, ನಾಮದೇವ ಮುಖ್ಯೋಪಾಧ್ಯಾಯರೊಂದಿಗೆ ಕೆಲಸ ಮಾಡುವ ಅವಕಾಶ ಪಡೆದಿದ್ದರು.

ಅನಂತರ ಬೀದರನಲ್ಲಿಯ ಮಾದರಿಯ ಸರಕಾರಿ ಮಾಧ್ಯಮಿಕ ಶಾಲೆಗೆ ವರ್ಗವಾಯಿತು. ಮಾಧ್ಯಮಿಕ ಶಾಲೆಯಲ್ಲಿರುವಾಗ ವಿದ್ಯಾರ್ಥಿಗಳಿಂದ ಚಂದ್ರಶೇಖರ ಆಜಾದ ನಾಟಕ ಆಡಿಸಿದ್ದರು. ಮಂಗಲಪೇಟದ ಪೊಲೀಸ ಕ್ವಾರ್ಟಸದಲ್ಲಿ ರಾಜ್ಯೋತ್ಸವದ ದಿನ ಮಕ್ಕಳು ನಾಟಕ ಆಡಿ ತೋರಿಸಿ ಪ್ರೇಕ್ಷಕರಿಂದ ಪ್ರಶಂಸೆಗೆ ಪಾತ್ರರಾದರು. ಇದೊಂದು ರಾಷ್ಟ್ರ ಪ್ರಚೋದಕ ನಾಟಕವಾಗಿತ್ತು. ಸುಮಾರು ಹನ್ನೊಂದು ವರ್ಷಗಳ ಕಾಲ ಪ್ರಾಥಮಿಕ ಶಾಲೆಯಲ್ಲಿ ಬೋಧಕರಾಗಿ ಕೆಲಸ ಮಾಡಿದ್ದರು.

ಮುಂದೆ ಧಾರವಾಡದ ಸಾಹಿತ್ಯಿಕ ವಾತಾವರಣದಲ್ಲಿ ಇರಬೇಕೆಂದು ಮನಸ್ಸು ಮಾಡಿದರು. ಅವರ ಪ್ರಯತ್ನ ಫಲಿಸಿತು. ಧಾರವಾಡದ ಮಲ್ಲಸಜ್ಜನ ವ್ಯಾಯಾಮ ಶಾಲೆಯಲ್ಲಿ ಸಿ.ಪಿ.ಎಡ್ ತರಬೇತಿಗಾಗಿ ನಿಯುಕ್ತರಾದರು. ಕೆ.ಜಿ.ನಾಡಗೇರ ಪ್ರಿನ್ಸಿಪಾಲರು ಬಹಳ ಶಿಸ್ತಿನವರಾಗಿದ್ದರು. ಅವರು ಬೀದರ ಭೂಮರೆಡ್ಡಿ ಕಾಲೇಜಿನ ಬಿ.ಟಿ.ಸಾಸನೂರ ರವರ ಗುರುಗಳಾಗಿದ್ದರು. ಅವರು ವಜ್ರಕ್ಕಿಂತ ಕಠೋರರು, ಹೂವಿಗಿಂತಲು ಕೋಮಲರು ಆಗಿದ್ದರು. ದೈಹಿಕ ಶಿಕ್ಷಣದ ಬಗ್ಗೆ ಅನೇಕ ಪುಸ್ತಕಗಳನ್ನು ಬರೆದಿದ್ದರು. ಅವರ ಪುಸ್ತಕಗಳೆ ಇವರಿಗೆ ಪಠ್ಯಪುಸ್ತಕಗಳಾಗಿದ್ದವು. ಅವರ ವ್ಯಕ್ತಿತ್ವವು ಇವರ ಮೇಲೆ ಗಾಢವಾದ ಪ್ರಭಾವ ಬೀರಿತೆಂದು ಶ್ರೀ ಪಂಚಾಕ್ಷರಿಯವರು ಹೇಳುತ್ತಾರೆ.

ಧಾರವಾಡದಲ್ಲಿ ಇವರು ಸಾಹಿತ್ಯಲೋಕದ ದಿಗ್ಗಜರಾದ ಬೆಟಗೇರಿ ಕೃಷ್ಣ ಶರ್ಮರವರ ಮನೆಗೆ

ರಾತ್ರಿ ಹೋಗಿ ಅವರ ಸಂಗದಲ್ಲಿ ಒಂದೇರಡು ತಾಸು ಕಳೆಯುತ್ತಿದ್ದರು. ಶ್ರೀ ಕೃಷ್ಣನು ತನ್ನ ತಾಯಿಗೆ ಬಾಯಿಯಲ್ಲಿ ಬ್ರಹ್ಮಾಂಡವನ್ನು ತೋರಿಸಿದಂತೆ ಅವರು ಶ್ರೀ ಪಂಚಾಕ್ಷರಿಯವರನ್ನ ಸಾಹಿತ್ಯ ಲೋಕದ ಪರಿಚಯವನ್ನ ಮಾಡಿಕೊಟ್ಟರು. ಸಾಮಾನ್ಯನಾದ ಇವರಿಗೆ ಅಕ್ಕರೆಯಿಂದ ಮಾತಾಡುತ್ತಿದ್ದರಲ್ಲದೆ ಒಂದು ದಿವಸವು ಕೂಡ ತಿಂಡಿ ತಿನಿಸದೆ ಕಳುಹಿಸುತ್ತಿರಲಿಲ್ಲ. ಇವರ ಮಾರ್ಗದರ್ಶನದಿಂದಲೆ ಚಂದ್ರಶೇಖರ ಆಜಾದ ನಾಟಕವು ಧಾರವಾಡದಿಂದ ಮುದ್ರಣ ಮಾಡಿಸಿದ್ದರು.

ವರಕವಿ ಬೇಂದ್ರೆಯವರ ಭೇಟಿಗೆ ಆಗಾಗ ಸಾಧನಕೇರಿಗೆ ಹೋಗುತ್ತಿದ್ದರು. ಬೇಂದ್ರೆಯವರೊಡನೆ ಮಾತನಾಡುವುದೆಂದರೆ ಇವರಿಗೆ ಬಲು ಆಸಕ್ತಿ. ಬೇಂದ್ರೆಯವರು ಸಾಮಾನ್ಯರಿಗೆ ಬಹಳ ಗೌರವ ಕೊಡುತ್ತಿದ್ದರು. ಮತ್ತು ಪ್ರೋತ್ಸಾಹಿಸುತ್ತಿದ್ದರು. ಅಂಗಹೀನರು, ದುರ್ಬಲರೆಂದರೆ ಅವರಿಗೆ ಪಂಚಪ್ರಾಣ. ಶ್ರೀ ಪಂಚಾಕ್ಷರಿಯವರು ಅಂಗಹೀನಳನ್ನೆ ಮದುವೆಯಾದ ಸುದ್ದಿ ಕೇಳಿ ಬೇಂದ್ರೆಯವರು ರೋಮಾಂಚನಗೊಂಡರು. ಬೀದರ ನಾಡು ಶರಣರ ಬೀಡು. ನೀನು ಶರಣರನ್ನ ಕುರಿತು ಚರಿತ್ರಗಳನ್ನು ಬರೆಯಬೇಕೆಂದು ಪ್ರೋತ್ಸಾಹಿಸಿದರು. ಅವರ ಪ್ರೇರಣೆಯ ಫಲವೇ ಇಂದು ಇವರು ಸಾಹಿತಿ ಎಂದು ಹೆಸರು ಪಡೆದಿದ್ದಾರೆ. ಕೆ.ಜಿ.ನಾಡಗೇರ, ದ.ರಾ.ಬೇಂದ್ರೆ, ಬೆಟಗೇರಿ ಕೃಷ್ಣಶರ್ಮ ಈ ತ್ರಿಮೂರ್ತಿಗಳನ್ನು ಇವರು ಜೀವನವಿರುವ ಪರ್ಯಂತ ಸ್ಮರಿಸುತ್ತಲೆ ಇರುತ್ತೇನೆಂದು ಹೇಳುತ್ತಾರೆ. ಧಾರವಾಡವು ಇವರಿಗೆ ಸಾಹಿತ್ಯದ ದೀಕ್ಷೆಯನ್ನ ಕೊಟ್ಟಿತು.

ಇಲ್ಲಿಂದ ಬೀದರ ತಾಲೂಕಿನ ಆಣದೂರ ಗ್ರಾಮಕ್ಕೆ ವರ್ಗವಾಯಿತು. ಅಲ್ಲಿ ನಾಲ್ಕೈದು ತಿಂಗಳುಗಳ ಕಾಲ ದೈಹಿಕ ಶಿಕ್ಷನೆಂದು ಸೇವೆ ಸಲ್ಲಿಸಿದರು.

ಅಲ್ಲಿಂದ ಎಸ್.ಟಿ.ಬಿ.ಟಿ. ಶಿಕ್ಷಕರ ತರಬೇತಿ ಶಾಲೆ ಬೀದರಗೆ ವರ್ಗವಾಯಿತು. ಸುಮಾರು ನಾಲ್ಕು ವರ್ಷ ತರಬೇತಿ ಶಾಲೆಯಲ್ಲಿ ಯಶಸ್ವಿಯಾಗಿ ಕೆಲಸ ಮಾಡಿದರು. ಇಲ್ಲಿ ಕಿತ್ತೂರು ರಾಣಿ ಚನ್ನಮ್ಮ ದಿನಾಚರಣೆ ಸಂದರ್ಭದಲ್ಲಿ ಜೋಗೇಂದ್ರ ಸಿಂಗ ಎಸ್.ಪಿ. ರವರನ್ನು ಆಮಂತ್ರಿಸಲಾಯಿತು. ಚಂದ್ರಕಾಂತ ಶೋಮಶೆಟ್ಟಿಯವರು ಚಿತ್ರಿಸಿದ ಚನ್ನಮ್ಮನ ಭಾವಚಿತ್ರವನ್ನು ಕಂಡು ಯುವ ಕಲಾವಿದರಾದ ಸೋಮಶೆಟ್ಟಿಯವರಿಗೆ ಹೊಗಳಿದ್ದರು. ಇದಲ್ಲದೆ ವಿ. ಕೃ. ಗೋಕಾಕ, ದ.ರಾ.ಬೇಂದ್ರೆಯವರನ್ನು ತರಬೇತಿ ಶಾಲೆಗೆ ಕರೆಸಿ ಅವರ ಭಾಷಣ ಶಿಕ್ಷಕ ವಿದ್ಯಾರ್ಥಿಗಳಿಗೆ ಉಣಬಡಿಸಿದ್ದರು.

ಅಲ್ಲಿಂದ ಬೀದರನ ಪದವಿ ಪೂರ್ವ ಕಾಲೇಜಿಗೆ ವರ್ಗವಾಯಿತು. ಉರ್ದು, ಮರಾಠಿ, ಕನ್ನಡ ಮಾಧ್ಯಮದ ಅನೇಕ ವಿದ್ಯಾರ್ಥಿಗಳಿಗೆ ಏಕೈಕ ದೈಹಿಕ ಶಿಕ್ಷಕರಾಗಿ ಕೆಲಸ ಮಾಡಿದ್ದಾರೆ. ಇಲ್ಲಿರುವಾಗ ಕೂಡ ನೆಹರು ಜಯಂತಿ, ಬಸವೇಶ್ವರ ಅಷ್ಟ ಶತಮಾನೋತ್ಸವ ಮುಂತಾದ ಮಹಾತ್ಮರ ಜಯಂತಿಗಳನ್ನು ಬಹಳ ಅದ್ದೂರಿಯಿಂದ ಮಾಡಿದ್ದರು. ಇವರ ಈ ಕೆಲಸಕ್ಕೆ ಅಯ್ಯಂಗಾರ ಎಂಬ ಪ್ರಾಚಾರ್ಯರು ಸಹಕರಿಸಿದ್ದರು.

ಇದಾದ ನಂತರ ಬಸವಕಲ್ಯಾಣದ ಸರ್ಕಾರಿ ಪ್ರೌಢ ಶಾಲೆಗೆ ವರ್ಗವಾಯಿತು. ಅಲ್ಲಿಯೂ ಕೂಡ ಉರ್ದು, ಮರಾಠಿ, ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿದ್ದರೂ ಒಬ್ಬನೇ ಒಬ್ಬ ದೈಹಿಕ ಶಿಕ್ಷಕ. ಇಷ್ಟು ವಿದ್ಯಾರ್ಥಿಗಳನ್ನು ಹತೋಟಿಯಲ್ಲಿಡಲು ಬಹಳ ಶ್ರಮ ಪಡುತ್ತಿದ್ದರು. ಹುಡುಗರಲ್ಲಿ ಶಿಸ್ತು ತರಲು ಪ್ರಾರ್ಥನೆ ಮಾಡಿಸುವುದು ಹುಡುಗರಿಂದ ಪಂಚಾಂಗ ಹೇಳಿಸುವುದು, ವಚನ ಹೇಳಿಸುವುದು ಮಾಡಿಸುತ್ತಿದ್ದರು.

ಶಿಕ್ಷಕ ವೃತ್ತಿ ಕೈಗೊಳ್ಳುತ್ತಲೆ ಬಿ.ಎ. ಪಾಸಾದರು. ಮುಂದೆ ಸರಕಾರವು ಬಿ.ಪಿ. ಎಡ್. ಮಾಡಲು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಕಳುಹಿಸಿದರು. ಆಗ ಒಂದು ವರ್ಷ ಬೆಂಗಳೂರಿನಲ್ಲಿರ ಬೇಕಾಯಿತು. ಬೆಂಗಳೂರಿನಲ್ಲಿಯೂ ಕೂಡ ಇವರಿಗೆ ಸಾಹಿತ್ಯದ ಗೀಳು ಬಿಡಲಿಲ್ಲ. ಶಿಕ್ಷಣದೊಂದಿಗೆ ಸಾಹಿತ್ಯದ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಮಾಸ್ತಿ ವೆಂಕಟೇಶ ಅಯ್ಯಂಗಾರ, ತೀ.ತಾ. ಶರ್ಮ, ಸಿದ್ಧಯ್ಯ ಪುರಾಣಿಕ ಮುಂತಾದ ಸಾಹಿತಿಗಳ ಉಪನ್ಯಾಸ ಕೇಳುತ್ತಿದ್ದರು. ಇದರಿಂದ ಅವರಲ್ಲಿ ಸಾಹಿತ್ಯದ ಒಲವು ಹೆಚ್ಚಿತಲ್ಲದೆ ಸಾಹಿತ್ಯ ರಚನೆ ಮಾಡುವ ಹುಟ್ಟಿತು.

ಬೆಂಗಳೂರಿನಲ್ಲಿದ್ದಾಗ ಆಗಾಗ ಚಿದಾನಂದ ಮೂರ್ತಿಯವರ ಮನೆಗೆ ಹೋಗುತ್ತಿದ್ದರು. ಅವರು ಸಾಹಿತ್ಯ ಪ್ರೇಮಿಗಳಿಗೆ ಬಹಳ ಹಚ್ಚಿಕೊಳ್ಳುತ್ತಿದ್ದರು. ನವ ಪ್ರಕಟಿತ ಪುಸ್ತಕಗಳನ್ನು ಓದಲು ಕೊಡುತ್ತಿದ್ದರು . ಇದಲ್ಲದೆ ವಿಶ್ವವಿದ್ಯಾಲಯದಲ್ಲಿ ಪಾಠ ಹೇಳುವ ಬರಗೂರು ರಾಮಚಂದ್ರಪ್ಪ, ಸೂರ್ಯನಾಥ ಕಾಮತ, ಸಿ.ವಿರಣ್ಣ ಮುಂತಾದವರ ಪರಿಚಯವಾಗಿತ್ತು. ತಿ.ತಾ.ಶರ್ಮರ ಹಿರಿಯ ಮಗನಾದ ಶ್ರೀ ರಂಗರು ಉಗ್ರ ಕನ್ನಡ ಅಭಿಮಾನಿಗಳ ಮನೆಗೆ ಆಗಾಗ ಹೋಗಿ ಕನ್ನಡದ ಅಭಿಮಾನವನ್ನು ಹೆಚ್ಚಿಸಿಕೊಳ್ಳುತ್ತಿದ್ದರು.

ತರಬೇತಿ ಪಡೆದ ನಂತರ ಬೀದರ ಸರಕಾರಿ ಕಾಲೇಜಿಗೆ ಬಂದರು. ಅಲ್ಲಿಂದ ಮೂರು ತಿಂಗಳುಗಳ ಕಾಲ ಮೈಸೂರಿನ ರಾಮಕೃಷ್ಣ ಆಶ್ರಮದಲ್ಲಿ ನೈತಿಕ ಮತ್ತು ಅಧ್ಯಾತ್ಮಿಕ ಶಿಕ್ಷಣ ಪಡೆಯಲು ಹೋದರು. ಆಶ್ರಮದ ಸುಂದರ ಪರಿಸರ, ಪ್ರಕೃತಿ ಸೌಂದರ್ಯ ಹಿಡಿಸಿತು. ಅಲ್ಲಿಯ ಸನ್ಯಾಸಿಗಳ ಕಟುವಾದ ಶಿಸ್ತು, ಸಂಯಮ ಸಂಸಾರಿಗಳಾದ ಇವರಿಗೆ ಸಹಿಸಲು ಕಷ್ಟ ಅನುಭವಿಸಬೇಕಾಯಿತು. ಮೈಸೂರಿನಲ್ಲಿದ್ದ ಪೂ.ತಿ.ನರಸಿಂಹಾಚಾರ್ಯ ಅವರ ಮನೆಗೆ ತಪ್ಪದೆ ಹೋಗುತ್ತಿದ್ದರು. ಅವರೊಡನೆ ಸಂಭಾಷಣೆ ಮಾಡುವುದೆಂದರೆ ಇವರಿಗೆ ಪಂಚಪ್ರಾಣ ಇಲ್ಲಿಯೇ ಇರುವಾಗ ದೆ.ಜ.ಗೌಡರು ಕುವೆಂಪು ಪ್ರೌಢ ಶಾಲೆಯಲ್ಲಿ ಒಂದು ಕಾರ್ಯಕ್ರಮದಲ್ಲಿ ಶ್ರೀ ಪಂಚಾಕ್ಷರಿಯನ್ನು ಅತಿಥಿಯಾಗಿ ಬರಮಾಡಿಕೊಂಡಿದ್ದರು. ಇವರ ಮಾತುಗಳು ಅವರಿಗೆ ಬಹಳಷ್ಟು ಹಿಡಿಸಿದವು. ಆ ಸಂದರ್ಭದಲ್ಲಿ ಅವರು ಇವರನ್ನು ಹೀಗೆ ಹೇಳುತ್ತಾರೆ. ‘ಮಂತ್ರಿಮಾನ್ಯರಿಗೆ ಆಮಂತ್ರಿಸಿದರೆ ಮಕ್ಕಳಿಗೆ ಇಷ್ಟು ಲಾಭವಾಗುತ್ತಿರಲಿಲ್ಲ. ಇವರ ಮಾತುಗಳು ಮಕ್ಕಳಿಗೆ ಬಹಳ ಉಪಯುಕ್ತವಾಗಿವೆ’ ಎಂದು ಬಣ್ಣಿಸಿದ್ದರು.

ಮಹಾಕವಿ ಕುವೆಂಪುರವರನ್ನು ಕಾಣಬೇಕೆಂಬ ಆತುರತೆ ಬಹಳ ಕಾಲದಿಂದಲು ಇವರ ಮನದಲ್ಲಿ ಮನೆಮಾಡಿತ್ತು. ಮೈಸೂರಿಗೆ ಬಂದಾಗ ಇವರ ಕನಸು ನನಸಾಯಿತು. ಒಂಟಿಕೊಪ್ಪಲಿನಲ್ಲಿರುವ ಅವರ ಮನೆ ‘ಉದಯರವಿ’ ಹುಡುಕುತ್ತ ಹೊರಟರು. ‘ಅರಸುವಬಳ್ಳಿ ಕಾಲಿಗೆ ತೊಡಕುವಂತೆ’ ಅವರ ಮನೆಯ ಮುಂಭಾಗದ ಚಿಕ್ಕ ತೋಟದಲ್ಲಿ ಅಲೆದಾಡುತ್ತಿದ್ದರು. ಅವರನ್ನು ಕಂಡಾಕ್ಷಣ ಇವರಿಗೆ ದೇವರ ಸಾಕ್ಷಾತ್ಕಾರವಾದಂತಾಯಿತು. ಅವರ ಜೊತೆ ಹತ್ತಾರು ನಿಮಿಷಗಳ ಕಾಲ ಬೀದರ ಜಿಲ್ಲೆಯ ಕನ್ನಡ ಸ್ಥಿತಿಗತಿಯ ಬಗ್ಗೆ ಚರ್ಚೆ ಮಾಡಿದರು. ಬೀದರನ ಸಚಿವರೊಬ್ಬರು ಕನ್ನಡಿಗರಾಗಿ ಇಂಗ್ಲೀಷನಲ್ಲಿ ಪ್ರಮಾಣ ವಚನ ಸ್ವೀಕರಿಸಿದ್ದರು. ಇದನ್ನು ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಪಂಚಾಕ್ಷರಿಯವರು ಖಂಡಿಸಿದ್ದರೇನೆಂದರೆ ಕರ್ನಾಟಕದಿಂದ ಆಯ್ಕೆಯಾದ ಇಂದಿರಾಗಾಂಧಿಯವರು ಲೋಕಸಭೆಯಲ್ಲಿ ಕನ್ನಡದಲ್ಲಿ ಪ್ರಮಾಣ ವಚನ ಸ್ವೀಕರಿಸಿದ್ದರು. ಆದರೆ ಕನ್ನಡಿಗರಾದ ಈ ಸಚಿವರು ಇಂಗ್ಲೀಷನಲ್ಲಿ ಪ್ರಮಾಣ

ವಚನ ಸ್ವೀಕರಿಸಿದ್ದು ಹೇಯಕೃತ್ಯವೆಂದು ಹೇಳಿದ್ದರು. ಇದನ್ನು ಕುವೆಂಪುರವರಿಗೆ ತಿಳಿಸಿದರು. ಆಗ ಅವರು ಕನ್ನಡಕ್ಕಾಗಿ ಕೆಲಸ ಮಾಡುವ ನಿಮಗೆ ಯಾವ ತೊಂದರೆಯೂ ಬರುವುದಿಲ್ಲ ಅಂತಹ ಪ್ರಸಂಗ ಬಂದರೆ ದೆ.ಜ.ಗೌಡರನ್ನು ಸಂಪರ್ಕಿಸಿ ಎಂದು ಹೇಳಿದ್ದರು. ಕನ್ನಡಕ್ಕಾಗಿ ತನ್ನ ಜೀವನವನ್ನು ಸವೆಸಿದ ಕವಿಯ ಅಭಯವಾಣಿ ಇವರಿಗೆ ರಕ್ಷಾ ಕವಚವಾಗಿ ಪರಿಣಮಿಸಿತು.

ತಿರುಗಿ ಪುನ: ಹುಮನಾಬಾದ ತಾಲೂಕಿನ ಬೆಮಳಖೇಡಕ್ಕೆ ವರ್ಗವಾಯಿತು. ಅಲ್ಲಿ ಸುಮಾರು ಆರು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಇಲ್ಲಿನ ಹುಡುಗರಲ್ಲಿ ಅಶಿಸ್ತು ತಾಂಡವವಾಡುತ್ತಿತ್ತು. ಅವರನ್ನು ಹತೋಟಿಗೆ ತರಲು ಬಹಳ ಹೆಣಗಾಡಬೇಕಾಯಿತು ಎಂದು ಹೇಳುತ್ತಾರೆ. ಕವಾಯಿತು ಮಾಡಿಸುವಾಗ ಅವರಿಗೆ ಶಿಸ್ತನ್ನು ಹೇಳಿಕೊಡುತ್ತಿದ್ದರು. ದೇಶ ಪ್ರೇಮದ ಮಾತುಗಳು, ಮಹಾತ್ಮರ ನುಡಿಗಳು ಪ್ರತಿ ದಿನ ಶಾಲೆಯ ಅಂಗಳದ ಬೋರ್ಡಿನ ಮೇಲೆ ದೊಡ್ಡ ಅಕ್ಷರದಲ್ಲಿ ಬರೆಯುತ್ತಿದ್ದರು. ಇದರ ಪರಿಣಾಮದಿಂದ ಹುಡುಗರಲ್ಲಿ ಶಿಸ್ತು, ಓದಿನ ಬಗ್ಗೆ ಆಸಕ್ತಿ ಹುಟ್ಟಿತು. ಸಿದ್ಧಪ್ಪಾ ಎಂಬ ಮುಖ್ಯೋಪಾಧ್ಯಾಯರು ಇವರ ಶ್ರಮ ನೀರಿನ ಮೇಲೆ ಗೆರೆ ಎಳೆದಂತಾಗುತ್ತಿತ್ತು ಎಂದು ಹೇಳುತ್ತಿದ್ದರೆಂದು ಶ್ರೀ ಪಂಚಾಕ್ಷರಿಯವರು ಹೇಳುತ್ತಾರೆ.

ಇಲ್ಲಿಂದ ಶ್ರೀ ಪಂಚಾಕ್ಷರಿಯವರಿಗೆ ಬೀದರ ತಾಲೂಕಿನ ಮಾಳೆಗಾಂವ ಎಂಬ ಗ್ರಾಮಕ್ಕೆ ವರ್ಗವಾಯಿತು. ಇಲ್ಲಿಯ ಮುಖ್ಯೋಪಾಧ್ಯಾಯರಾದ ವೀರಸೇನರು ದಕ್ಷರು ಹಾಗೂ ಕರ್ತವ್ಯ ಶೀಲರು ಆಗಿದ್ದರು. ಇವರ ಅಧೀನದಲ್ಲಿ ಕೆಲಸ ಮಾಡಿದ್ದರು. ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರಿಗೆ 1993ರಲ್ಲಿ ಮಾಳೆಗಾಂವ ಸರ್ಕಾರಿ ಶಾಲೆಯಿಂದ ನಿವೃತ್ತಿ ಹೊಂದಿದ್ದರು. ಈಗ ಇವರು ಬೀದರನ ಕುಂಬಾರವಾಡದಲ್ಲಿ ವಾಸವಾಗಿದ್ದಾರೆ.

**ಸಾಹಿತ್ಯಕ ಹಿನ್ನೆಲೆ ಮತ್ತು ಪರಿಸರ :**

ಎಲ್ಲ ಬಲ್ಲವರಿಲ್ಲ, ಬಲ್ಲಿದವರು ಬಹಳಿಲ್ಲ
ಬಲ್ಲಿದರು ಇದ್ದು ಬಲವಿಲ್ಲ
ಸಾಹಿತ್ಯ ಎಲ್ಲವರಿಗಿಲ್ಲ ಸರ್ವಜ್ಞ

- ಸರ್ವಜ್ಞ

ಮಹಾಕವಿ ಸರ್ವಜ್ಞನ ಈ ತ್ರಿಪದಿಯು ಸಾಹಿತ್ಯದ ಹಿರಿಮೆಯನ್ನು ತೋರಿಸುತ್ತದೆ. ಸಾಹಿತ್ಯ, ಸಂಗೀತ, ಕಲೆ ಮುಂತಾದ ಲಲಿತ ಕಲೆಗಳು ಜನ್ಮತಃ ಬಂದವುಗಳಾಗಿವೆ. ಕಲಿತು ಸಾಹಿತಿಯಾಗುವುದು ಸಾಧ್ಯವಿಲ್ಲ, ಪ್ರತಿಭೆ ಬೇಕೆಂದು ಸರ್ವಜ್ಞನ ತ್ರಿಪದಿಯಿಂದ ತಿಳಿದುಬರುತ್ತದೆ.

ಪುಣ್ಯಶೆಟ್ಟಿಯವರು ಮನೆತನದಲ್ಲಿ ಸಾಕ್ಷರರಾಗಿದ್ದರು. ಆದರೆ ಯಾರು ಪದವಿ ಪಡೆದಿರಲಿಲ್ಲ. ಆದರೂ ಅವರು ಶಾಸ್ತ್ರಪುರಾಣ ಬಲ್ಲವರಾಗಿದ್ದರು. ಅಧ್ಯಾತ್ಮದಲ್ಲಿ ಆಸಕ್ತಿಯುಳ್ಳವರಾಗಿದ್ದರು. ಈ ಸುಸಂಸ್ಕೃತ ಮನೆತನದವರು ಯಾವಾಗಲು ವ್ಯಕ್ತಿ ಹಿತಕ್ಕಿಂತಲು ಸಾಮೂಹಿಕ ಹಿತ ಬಯಸಿದವರು ಇಂತಹವರ ಪರಿಣಾಮದಿಂದ ಶ್ರೀ ಪಂಚಾಕ್ಷರಿಯವರಲ್ಲಿ ಸಾಹಿತ್ಯದ ಅಭಿರುಚಿ ಉಂಟಾಗಿರಬೇಕೆಂದು ಸೂಚಿಸುತ್ತದೆ. ಇವರ ತಂದೆಯಾದ ಶಿವರುದ್ರಪ್ಪನವರು ಸರ್ವಜ್ಞನ ವಚನಗಳನ್ನು ಪಠಿಸುತ್ತಿದ್ದರು. ಈ ವಚನಗಳನ್ನು

ಇವರು ಪಠಿಸುವುದರಿಂದ ಚಿಕ್ಕಂದಿನಿಂದಲೆ ಸಾಹಿತ್ಯಿಕ ಪರಿಸರದಲ್ಲಿ ಬೆಳೆದು ಬಂದಿದ್ದಾರೆ.

ಪುಣ್ಯಶೆಟ್ಟಿಯವರಿಗೆ ಅವರ ಗ್ರಾಮದ ಪರಿಸರ ಅಂದರೆ ಹಳ್ಳದ ದಂಡೆಯ ಮೇಲೆ ಪುರಾತನ ಕಾಲದ ಬಸವಣ್ಣದೇವರ ಗುಡಿ, ಆ ದೇವರ ಅಂಕಿತವನಿಟ್ಟುಕೊಂಡು ಈ ಊರಿನ ಕವಿಗಳಾದ ಕರಿಬಸಪ್ಪನವರು ಅನೇಕ ಕಾವ್ಯ ಕವಿತೆಗಳನ್ನು , ಸ್ವರ ವಚನಗಳನ್ನು ರಚಿಸಿದ್ದಾರೆ. ಈ ದೇವಾಲಯದಿಂದ ಗ್ರಾಮದ ಜನರಲ್ಲಿ ದೈವಭಕ್ತಿ ಮನೆ ಮಾಡಿದೆ. ಹಳ್ಳದ ದಂಡೆಯ ಮೇಲಿನ ಗುಡಿಯ ಹತ್ತಿರ ಜಡೆ ಬಿಟ್ಟ ವಿಶಾಲವಾದ ಆಲದ ಮರಗಳಿವೆ. ನದಿಯಲ್ಲಿನ ನೀರು ಕಾಲುವೆ ಮುಖಾಂತರ ಹರಿಯುವುದರಿಂದ ಗ್ರಾಮದ ಸುತ್ತಮುತ್ತಲಿನ ಹೊಲಗದ್ದೆಗಳೆಲ್ಲವು ಹಸಿರುಗೊಳ್ಳುತ್ತವೆ. ಇಂತಹ ಪರಿಸರವು ಚಿಕ್ಕವರಿರುವಾಗಲೆ ಇವರನ್ನು ರಸಿಕರನ್ನಾಗಿ ಮಾಡಿದೆ.

ಬಾಲ್ಯದಿಂದಲೆ ಶ್ರೀ ಪಂಚಾಕ್ಷರಿಯವರಿಗೆ ಕವಿಯಾಗಬೇಕೆಂಬ ಹುಚ್ಚು ಕಾಡುತಿತ್ತು ಸೂರ್ಯೋದಯದ ಕಾಲಕ್ಕೆ ಇವರು ಪೂರ್ವಾಭಿಮುಖವಾಗಿ ನಿಂತುಕೊಂಡು 'ರವಿ ಮಾಡು ಎನಗೆ ಮಹಾಕವಿ'ಎಂದು ಪ್ರಾರ್ಥಿಸುತ್ತಿದ್ದರು. ಇವರ ಪ್ರಾರ್ಥನೆಗೆ ಸೂರ್ಯದೇವನು ಓಗೊಟ್ಟಿರಬಹುದೆನಿಸುತ್ತದೆ. ಇದರ ಕಾರಣದಿಂದಲೆ ವಿದ್ಯಾರ್ಥಿ ಜೀವನದಿಂದಲೆ ಆಗಾಗ ಚಿಕ್ಕ ಪುಟ್ಟ ಕವಿತೆಗಳನ್ನು ಬರೆದು ಆನಂದ ಪಡುತ್ತಿದ್ದರು.

ಐನೋಲಿ ಗ್ರಾಮದ ಪರಿಸರವು ಇವರ ಕವಿತೆಗೆ ಪ್ರೇರಣೆ ಕೊಟ್ಟಿತು. ಇವರ ದೊಡ್ಡಪ್ಪನವರಾದ ಚನ್ನವೀರಪ್ಪನವರ ಮನೆಯಲ್ಲಿ ವಾರಕ್ಕೊಮ್ಮೆ ಗುರುವಾರ ರಾತ್ರಿ ಭಜನೆ ನಡೆಯುತ್ತಿತ್ತು. ಸುತ್ತಲಿನ ಗ್ರಾಮದ ಭಜನೆ ಮಂಡಲಿಯವರು, ಮುಂತಾದ ಹಾಡು ಬಲ್ಲವರು ಬಂದು ತಮ್ಮ ಸುಶ್ರಾವ್ಯ ಕಂಠದಿಂದ ಕೇಳುಗರನ್ನು ಕಿನ್ನರ ಲೋಕಕ್ಕೆ ಕರೆದೊಯ್ಯುತ್ತಿದ್ದರು. ಅಂತಹ ಆನಂದ ಪಡೆಯುವವರಲ್ಲಿ ಶ್ರೀ ಪಂಚಾಕ್ಷರಿಯವರೊಬ್ಬರಾಗಿದ್ದರು. ಭಜನೆಯ ತಾಳ, ಹಾಡಿನ ಲಯ ಇವೆಲ್ಲ ಇವರಿಗೆ ಹಿಡಿಸುತ್ತಿದ್ದವು. ಈ ತತ್ವದ ಹಾಡುಗಳನ್ನು ಕೇಳುತ್ತಿದ್ದ ಇವರಿಗೆ ತಾವು ಏಕೆ ಕವಿಯಾಗಬಾರದೆಂದೆನಿಸಿತು. ಸುಮಾರು ವರ್ಷಗಳ ನಂತರ ಕೆಲವು ಕವಿತೆಗಳನ್ನು ಬರೆದು ಸಭೆ ಸಮಾರಂಭಗಳಲ್ಲಿ ವಾಚನ ಮಾಡಿ ಜನರ ಪ್ರಶಂಸೆಗೆ ಪಾತ್ರರಾಗಿದ್ದರು.

ಕೆಲವು ವ್ಯಕ್ತಿಗಳ ಮೇಲೆ ಕವಿತೆಗಳನ್ನರಚಿಸಿ ಅವರ ಮುಂದೆ ಅವುಗಳನ್ನು ವಾಚನ ಮಾಡಿ ಅವರಿಂದ ಪ್ರಶಂಸಿಸಿಕೊಂಡಿದ್ದರು. ಅವರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಡಿ.ಸಿ.ಪಾವಟೆಯವರ ಬಗ್ಗೆ ಕವಿತೆಯನ್ನು ಭೂಮರೆಡ್ಡಿ ಮಹಾವಿದ್ಯಾಲಯದಲ್ಲಿ ವಾಚನ ಮಾಡಿದ್ದರು ಇದನ್ನು ಕಂಡ ಅವರು 'ವೇರಿ ನೈಸ್' ಎಂದು ಬೆನ್ನ ತಟ್ಟಿದ್ದರು. ಈ ಹಾಡು 'ಓ ನವಭಾರತದ ಭಾಸ್ಕರ ಗಣಿತವೇ ನಿನ್ನೋಗರ ' ಎಂದು ಪ್ರಾರಂಭವಾದ ಈ ಕವಿತೆ ಅವರ ಜೀವನವನ್ನು ಕುರಿತು ಬರೆದಿದ್ದರು. ಇದರಂತೆ ತೀ.ತಾ.ಶರ್ಮ ರವರ ಬೀದರನಲ್ಲಿ ಶಷ್ಠಬ್ದಿ ಸಮಾರಂಭದಲ್ಲಿ ಅವರ ಹೋರಾಟವನ್ನು ಚಿತ್ರಿಸುವ 'ಕನ್ನಡವಕ್ಕಿ' ಎಂಬ ಶಿರೋನಾಮೆಯ ಕವಿತೆ ಬರೆದು ವಾಚನಮಾಡಿದ್ದರು.

ಅದಲ್ಲದೆ ಪ್ರಜಾರಾಜ್ಯೋತ್ಸವ ಕಾಲಕ್ಕೆ ಒಂದು ಕವಿತೆಯನ್ನ ರಚಿಸಿದ್ದರು ಅದು ಹೀಗಿದೆ-

ಪ್ರಜಾರಾಜ್ಯೋತ್ಸವವು ಸಂಭ್ರಮದಿ ಸಾಗುತಿದೆ.
ಪ್ರಜಾಮಾತೆ ಭಾರತಿಯ ಕಂಬನಿಯು ಹನಿಯುತಿದೆ.
ಮಾತೆಯ ಹೃದಯದೊಳ್ ವಿಷಜಂತು ಜನಿಸಿದೆ.
ಮಾತೆ ಮೊಲೆ ಹಾಲುಂಡು ವಿಷವು ಕಾರುತಿವೆ.
ಶ್ವೇತ ಬಾತಿನ ತೆರದಿ ನಾಟ್ಯ ಗೈಯುತ್ತಿವೆ.
ಚಿತ್ತವಿಲ್ಲದ ಹೃದಯ ವೀಣೆ ಮಿಡಿಯುತ್ತಿದೆ.

ಭಾರತಮಾತೆಯ ಅನ್ನವನ್ನುಂಡು ವಿದೇಶದ ಬಗ್ಗೆ ಪ್ರೇಮವಿರುವ ಜನರನ್ನು ಕುರಿತು ಬರೆಯಲಾಗಿದೆ. ಇದರಂತೆ ರಾಷ್ಟ್ರ ಧ್ವಜದ ಬಗ್ಗೆ ಕವಿತೆ ಬರೆದಿದ್ದರು.

ಕೆಂಪು ಬಿಳುಪು ಹಸಿರು
ವರ್ಣದಿಂ ಕಂಗೊಳಿಪ
ಮೂವರ್ಣ ಖಗರಾಜ ಮಣಿಯವೆನು
ಸುತ್ತಮುತ್ತಣ ಶಿಖೆಯು
ಮೈಗೆ ಮುತ್ತಿದರೇನು?
ನಿಶ್ಚಲಾತ್ಮದಿ ನಿನ್ನ ರಕ್ಷಿಪೆನು.

ಈ ರೀತಿಯಾಗಿ ರಾಷ್ಟ್ರ ಧ್ವಜವನ್ನ ಕುರಿತು ವಿವರವಾಗಿ ಬಣ್ಣಿಸಿದ್ದರು. ಇಂತಹ ಅನೇಕ ಕವಿತೆಗಳನ್ನು ಸಂಗ್ರಹಿಸಿದರೆ ಒಂದು ಕವನ ಸಂಕಲನವಾಗಬಹುದಿತ್ತು. ಆದರೆ, ಇನ್ನು ಪಕ್ವವಾಗಲಾರದಂತಹ ಕವಿತೆಗಳನ್ನ ಪ್ರಕಟಿಸಬಾರದೆಂದು ಭಾವಿಸಿದ್ದರು. ಮುಂದೆ ಸಾಹಿತ್ಯ ಕೃತಿಗಳನ್ನ ರಚಿಸಬೇಕೆಂಬ ಹಂಬಲವುಂಟಾಗಿ ಕವಿತೆಗೆ ಶರಣು ಹೊಡೆದರು.

ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕರಾಗಿದ್ದಾಗಲೆ ಚಂದ್ರಶೇಖರ ಆಜಾದ ಸ್ವಾತಂತ್ರ ಹೋರಾಟಗಾರ ಜೀವನ ಚರಿತ್ರೆಯನ್ನ ಓದಿ ಅವರ ಮೇಲೆ ಏಕೆ ಏಕಾಂಕ ನಾಟಕ ಬರೆಯಬಾರದೆಂದು ನಿಶ್ಚಯಿಸಿ ಬರೆದರು. ಈ ನಾಟಕವು ಮಂಗಲಪೇಟದಲ್ಲಿ ವಿದ್ಯಾರ್ಥಿಗಳಿಂದ ಪ್ರದರ್ಶಿತವಾಯಿತು ಇದರಿಂದ ಶ್ರೀ ಪಂಚಾಕ್ಷರಿಯವರ ಬಗ್ಗೆ ಎಲ್ಲರಲ್ಲಿ ಗೌರವ ಹೆಚ್ಚಿತು. ನಂತರ ಇವರು ಸ್ವಾತಂತ್ರ ಹೋರಾಟಗಾರರಾದರೂ, ಸಮಾಜದ ಆಲಕ್ಷಕ್ಕೆ ಒಳಗಾದ ಬಸವರಾಜ ಹುಡುಗಿ ಅಂದಿನ ಕಾಲಮಾನದ ಬಗ್ಗೆ ಜೀವನ ಚರಿತ್ರೆ ಬರೆದರು. ಅಲ್ಲದೆ ನಾವದಗಿ ಶ್ರೀ ರೇವಪಯ್ಯನವರ ಜೀವನ ಚರಿತ್ರೆಯನ್ನು ಯಾರು ಬರೆದಿರಲಿಲ್ಲ. ಇವರು ಅವರ ಜೀವನದ ಘಟನೆಗಳನ್ನು ಕಲೆಹಾಕಿ ಅವರ ಚರಿತ್ರೆಯನ್ನು ಬರೆದರು. ಅಲ್ಲದೆ ಚಕ್ರಕೋಟಿ ಬಾಯವ್ವ, ಸಮಾಜವಾದಿ ಹೋರಾಟಗಾರ ಶ್ರೀವೈಜಿನಾಥ ಪಾಟೀಲ, ಶ್ರೀ ಚನ್ನಬಸವ ಪಟ್ಟದೇವರ ಹೋರಾಟದ ಬದುಕು, ಸಜ್ಜನರ ಸಂಗದಲ್ಲಿ ಹೀಗೆ ಸುಮಾರು ಏಳುಜೀವನ ಚರಿತ್ರೆಗಳನ್ನು ಬರೆದು ಇವರು

ಚರಿತ್ರಕಾರರೆಂದು ಪ್ರಸಿದ್ಧರಾಗಿದ್ದಾರೆ. ಇವರು ಸಾಹಿತ್ಯ ರಚನೆಗೆ ಅನೇಕ ಹಿರಿಯ ಸಾಹಿತಿಗಳ ಪ್ರೋತ್ಸಾಹ ಸಹಾಯ ದೊರೆಯಿತು ಎಂದು ಹೇಳಬೇಕು.

**ಸಾಮಾಜಿಕ ಸೇವೆ :**

ಮನುಷ್ಯನು ಸಮಾಜ ಜೀವಿ 'Man is a Social Animal'. ಸಮಾಜ ಬಿಟ್ಟು ಅವನಿಲ್ಲ ಏಕಾಂಗಿಯಾಗಿದ್ದು ಮನುಷ್ಯ ಮನುಷ್ಯನಾಗಿ ಬಾಳಲಾರ. ನಮ್ಮ ಪ್ರತಿಯೊಂದು ಚಟುವಟಿಕೆಗಳು ಸಮಾಜದಲ್ಲಿಯೇ ನಡೆಯುತ್ತವೆ. ಈ ಕಾರಣ ನಾವು ಸಮಾಜದ ಋಣಿಯಾಗಿದ್ದೇವೆ. ತಂದೆ-ತಾಯಿಗಳ ಋಣ, ಮಾತೃ ಭಾಷೆಯ ಋಣ, ದೇಶದ ಋಣ ನಮ್ಮ ಮೇಲಿರುತ್ತದೆ. ನಾವು ನಮ್ಮವರು ಇರುವ ತನಕ ಈ ಋಣ ಭಾರದಿಂದ ಮುಕ್ತರಾಗಲು ಪ್ರಯತ್ನಿಸಬೇಕು. ಬಸವಣ್ಣನವರು ತಮ್ಮ ವಚನದಲ್ಲಿ ತಾವು ಮಾಡುವ ಪ್ರತಿಯೊಂದು ಕೆಲಸವು ಸಮಾಜದ ಋಣವನ್ನು ತೀರಿಸಲಿಕ್ಕಾಗಿ ಮೂಡಿಪಾಗಿಟ್ಟದ್ದೆನೆಂದು ಹೇಳುತ್ತಾರೆ.

ಪಂಚಾಕ್ಷರಿ ಪುಣ್ಯಶೆಟ್ಟಿಯವರು ಈ ಉದ್ದೇಶದಿಂದಲೆ ತಮ್ಮ ಹೊಟ್ಟೆ ಪಾಡಿಗಾಗಿ ಸರಕಾರಿ ನೌಕರಿ ಮಾಡುತ್ತಲೇ ಸಮಾಜಕ್ಕೆ ಅಳಿಲು ಸೇವೆ ಸಲ್ಲಿಸಿದ್ದಾರೆ. ಇವರು ಉರ್ದು ಮಾಧ್ಯಮದಲ್ಲಿ ಕಲಿತು, ಕನ್ನಡ ಎರಡನೆ ಭಾಷೆಯಾಗಿ ಅಭ್ಯಾಸ ಮಾಡಿದ್ದರು. ಅಂದಿನ ಪಠ್ಯಪುಸ್ತಕಗಳಲ್ಲಿ ಕನ್ನಡ ಭಾಷೆಯ ಬಗ್ಗೆ ಅಭಿಮಾನವನ್ನು ಹುಟ್ಟಿಸುವ ಪದ್ಯಗಳನ್ನ ಓದಿ ಅವರಿಗೆ ಕನ್ನಡ ಭಾಷೆಯ ಬಗ್ಗೆ ಪ್ರೇಮ ಅಂಕುರಿಸಿತು. ಪಾಠ ಹೇಳುತ್ತಿರುವ ಕೃಷ್ಣಾಚಾರ ಸಗರ ಎಂಬ ಶಿಕ್ಷಕರ ಪ್ರಭಾವ ಇವರ ಮೇಲಾಯಿತು. ಬೀದರನಲ್ಲಿ ಇವರು ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವಾಗ ಕನ್ನಡ ತಾಯಿಯ ಸೇವೆ ಮಾಡುವ ಸುಸಂದರ್ಭ ಒದಗಿತು.

೧೯೭೦ರ ವೇಳೆಗೆ ಹಣಮಂತಪ್ಪಾ ಪಾಟೀಲರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಅಂದು ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಬೀದರ ತಾಲ್ಲೂಕಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಇದಕ್ಕೂ ಮೊದಲು ಕನ್ನಡ ಪರ ಚಟುವಟಿಕೆಗಳು ಬೀದರ ಜಿಲ್ಲೆಯಲ್ಲಿ ನಡೆಯುತ್ತಿರಲಿಲ್ಲ ಎಂದು ಹೇಳುತ್ತಾರೆ. ಈ ಅವಧಿಯಲ್ಲಿ ಸಿಂಪಿ ಲಿಂಗಣ್ಣನವರು ಬೀದರ ನಗರದಲ್ಲಿ ವಾಸವಾಗಿದ್ದರು. ಅವರ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಜೊತೆಗೆ ಪಂಚಾಕ್ಷರಿಯವರು ಕನ್ನಡ ಪರ ಚಟುವಟಿಕೆಗಳನ್ನು ಮಾಡುತ್ತಿದ್ದರು. ಶಾಲಾ ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ ಇಂತಹವರ ಭಾಷಣಗಳನ್ನು ಆಯೋಜಿಸಿ ಕೇಳಿ ಸಂತಸ ಪಡುತ್ತಿದ್ದರು. ಅಲ್ಲದೆ ಬೀದರಕ್ಕೆ ಇತಿಹಾಸಕಾರರಾಗಿ ಆಗಮಿಸಿದ ತೀ. ತಾ. ಶರ್ಮರವರು ಮೂರು ತಿಂಗಳ ಕಾಲ ಉಳಿದಿದ್ದರು. ಅದರ ಸದುಪಯೋಗವನ್ನು ಪಡೆದುಕೊಂಡ ಪಂಚಾಕ್ಷರಿಯವರು ಅವರ ಭಾಷಣಗಳನ್ನು ಶಾಲೆಗಳಲ್ಲಿ ಏರ್ಪಡಿಸುತ್ತಿದ್ದರು. ತೀ. ತಾ. ಶರ್ಮರವರು ದೇಶಾಭಿಮಾನಿಗಳು, ಭಾಷಾಭಿಮಾನಿಗಳು ಆಗಿದ್ದರು. ಅವರ ಪ್ರಭಾವ ಬೀದರನ ವಿದ್ಯಾರ್ಥಿಗಳಿಗೆ ಅಷ್ಟೇ ಅಲ್ಲದೆ ಅವರ ಸಂಪರ್ಕಕ್ಕೆ ಬಂದ ಅನೇಕರ ಮೇಲಾಗಿದೆ. ನಗರ ಸಭೆಯ ದೊಡ್ಡ ಗ್ರಂಥಾಲಯದಲ್ಲಿ ಅವರ ಷಷ್ಟ್ಯಬ್ಧಿ ಆಚರಣೆ ಮಾಡಿದ್ದರು. ಅವರಿಗೆ ಬೀದರ ನಗರದ ಐತಿಹಾಸಿಕ ಸ್ಥಳಗಳಿಗೆ ಕರೆದೊಯ್ಯುತ್ತಿದ್ದರು. ಅಲ್ಲದೆ ಸಿಂಪಿ ಲಿಂಗಣ್ಣನವರ ಸನ್ಮಾನ ಸಮಾರಂಭಗಳನ್ನು ಸಹ ಇವರು ಬೀದರ ಜಿಲ್ಲೆಯ ತುಂಬೆಲ್ಲಾ ಪಂಚಾಕ್ಷರಿಯವರು ಹಮ್ಮಿಕೊಂಡಿದ್ದರು.

ಅಂದು ಸಾಹಿತ್ಯ ಪರಿಷತ್ತಿನ ಕಾರ್ಯಕ್ರಮಗಳು ಈಗಿನ ಕರ್ನಾಟಕ ಸಾಹಿತ್ಯ ಸಂಘದ ಸ್ಥಳದಲ್ಲಿ ಏರ್ಪಡಿಸುತ್ತಿದ್ದರು. ಜನರಿಗೆ ಕೂಡಿ ಹಾಕುವುದೇ ಬಹಳ ಕಷ್ಟದ ಕೆಲಸವಾಗುತ್ತಿತ್ತು. ಕಾರಣವೇನೆಂದರೆ ಈಗಿನಂತೆ ಪತ್ರಿಕೆಗಳಿರಲಿಲ್ಲ. ಅಂದು ಇವರು ಕಪ್ಪು ಹಲಗೆಯ ಮೇಲೆ ಕಾರ್ಯಕ್ರಮದ ವಿವರಗಳನ್ನು ಬರೆದು ಛತ್ರಿ ಚೌಕದ (ಈಗಿನ ಅಂಬೇಡ್ಕರ ವೃತ್ತದ) ಹತ್ತಿರ ಇಡುತ್ತಿದ್ದರು. ಜನರು ಅದನ್ನು ಓದಿ ಕಾರ್ಯಕ್ರಮಕ್ಕೆ ಬರುತ್ತಿದ್ದರು. ಅಂದು ಭೂಮರೆಡ್ಡಿ ಮಹಾವಿದ್ಯಾಲಯಕ್ಕೆ ಬಂದಂತಹ ವೀರೇಂದ್ರ ಸಿಂಪಿ, ಕೆ. ಎಸ್. ರಾಜ, ಶಶಿಕಲಾ ವಸ್ತ್ರದ, ಲೀಲಾವತಿ ಚಾಕೋತೆ ಮುಂತಾದ ಉಪನ್ಯಾಸಕರನ್ನು ಬರಮಾಡಿಕೊಂಡು ಅವರಿಂದ ಲಾಭ ಪಡೆಯುತ್ತಿದ್ದರು. ಅಲ್ಲದೆ ಡಾ. ನಂಜುಂಡಪ್ಪನವರು ಬಂದು ಹೋಗಿದ್ದರು ಎಂದು ಹೇಳುತ್ತಾರೆ. ಈ ರೀತಿ ಹನಮಂತಪ್ಪಾ ಪಾಟೀಲರ ನೇತೃತ್ವದಲ್ಲಿ ಕೆಲಸ ಮಾಡಿದರು. ಅವರಿಗೆ ಕನ್ನಡದ ಸೇವೆ ಮಾಡುವ ಹುಚ್ಚು ಇತ್ತು. ಸುಮಾರು ಎಂಟು ವರ್ಷಗಳ ಕಾಲ ಕಾರ್ಯದರ್ಶಿಯಾಗಿ ಹಣಮಂತಪ್ಪನವರಿಗೆ ಹೆಗಲು ಕೊಟ್ಟು ದುಡಿದರು. ಈ ಅವಧಿಯಲ್ಲಿ ಮೊದಲನೆಯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ಜರುಗಿತು. ಇದರ ಮೆರವಣಿಗೆಯ ಉಸ್ತುವಾರಿಯನ್ನು ಇವರಿಗೆ ವಹಿಸಿಕೊಟ್ಟಿದ್ದರು. ಈ ಸಮ್ಮೇಳನದ ಅಧ್ಯಕ್ಷರಾಗಿದ್ದ ಜಿ. ವೆಂಕಟಸುಬ್ಬಯ್ಯನವರನ್ನು ನೂರಾರು ಎತ್ತಿನ ಬಂಡಿಗಳನ್ನು ತರಿಸಿ ಅಭೂತಪೂರ್ವವಾದ ರೀತಿಯಲ್ಲಿ ಮೆರವಣಿಗೆಯನ್ನು ಮಾಡಿದ್ದರು. ಈ ರೀತಿಯ ಕಾರ್ಯಕ್ರಮವು ಉತ್ತರ ಕರ್ನಾಟಕದಲ್ಲಿಯೇ ಎಲ್ಲಿಯೂ ಮೊದಲು ನಡೆದಿರಲಿಲ್ಲ ಎಂದು ಜಿ. ನಾರಾಯಣರು ಹೇಳುತ್ತಿದ್ದರೆಂದು ಗೊತ್ತಾಗುತ್ತದೆ. ಇದಲ್ಲದೆ ಹಣಮಂತಪ್ಪಾ ಪಾಟೀಲರ ಕಾಲದಲ್ಲಿ ಜಾನಪದ ಕಲಾಮೇಳ, ಮಹಿಳಾ ವರ್ಷ ಮುಂತಾದ ಕಾರ್ಯಕ್ರಮಗಳು ಅತ್ಯಂತ ವೈಭವದಿಂದ ಜರುಗಿದ್ದವು. ಈ ಕಾರ್ಯಕ್ರಮಗಳಲ್ಲಿ ಪಂಚಾಕ್ಷರಿಯವರು ಸಕ್ರಿಯವಾಗಿ ಕೆಲಸ ಮಾಡುತ್ತಿದ್ದರು.

೧೯೭೮ ರಲ್ಲಿ ಪಂಚಾಕ್ಷರಿಯವರನ್ನು ಕನ್ನಡಾಭಿಮಾನಿಗಳು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರನ್ನಾಗಿ ನೇಮಕ ಮಾಡಿದ್ದರು. ಇವರ ಕಾಲದಲ್ಲಿ 'ರಾಜ್ಯ ಮಟ್ಟದ ಮಕ್ಕಳ ಕೂಟಗಳು ಜರುಗಿದವು. ಎಲ್ಲಾ ತಾಲೂಕಾಗಳಲ್ಲಿ ಮಕ್ಕಳ ಚಿತ್ರ ಕಲಾ ಸ್ಪರ್ಧೆಗಳು ನಡೆದವು. ಚಿತ್ರಕಲಾ ಸ್ಪರ್ಧೆಯಲ್ಲಿ ಔರಾದಿನ ಓರ್ವ ಹುಡುಗಿ ರಾಜ್ಯ ಮಟ್ಟದ ಸ್ಪರ್ಧೆಯಲ್ಲಿ ಬಹುಮಾನ ಪಡೆದಳು.ಕಾದಂಬರಿ ಸಾಮ್ರಾಟರಾದ ಬಸವರಾಜ ಕಟ್ಟಿಮನಿಯವರನ್ನು ಆಮಂತ್ರಿಸಿ ಎಲ್ಲಾ ತಾಲೂಕಾಗಳಲ್ಲಿ ಅವರ ಉಪನ್ಯಾಸಗಳನ್ನು ಏರ್ಪಡಿಸಿದರು. ಇವರ ಕಾಲದಲ್ಲಿ ದೇ.ಜವರೇಗೌಡರು, ಶಿವರಾಮ ಕಾರಂತರು, ವಿಜಯ ಸಾಸನೂರು, ಬೀಚಿ, ರೇವಣಸಿದ್ಧಯ್ಯ ಮಠ ಅವರು ಆಗಮಿಸಿ ಉಪನ್ಯಾಸ ನೀಡಿದ್ದರು.'[೧] ಇವರಿಂದಾಗಿ ಇಲ್ಲಿಯ ಜನತೆಗೆ ಅವರ ಉಪನ್ಯಾಸಗಳು ಬಹಳ ಹಿಡಿಸಿದವು.

೧೯೮೯ ರಲ್ಲಿ ಶ್ರೀ ಪಂಚಾಕ್ಷರಿಯವರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರ ಚುನಾವಣೆಯಲ್ಲಿ ಆಯ್ಕೆಯಾದರು. ಇವರ ಅವಧಿಯಲ್ಲಿ ಮೂರನೇ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನವನ್ನು ವೀರೇಂದ್ರ ಸಿಂಪಿಯವರ ಅಧ್ಯಕ್ಷತೆಯಲ್ಲಿ ಬಹಳ ವಿಜೃಂಭಣೆಯಿಂದ ನೆರವೇರಿಸಿದರು. ಈ ಸಮಯದಲ್ಲಿ ರಾಜ್ಯದ ಹೆಸರಾಂತ ಸಾಹಿತಿಗಳಾದ 'ಗಿರಡ್ಡಿ ಗೋವಿಂದರಾಜ, ಶೈಲಜಾ ಉಡಚಣ, ಚಂದ್ರಶೇಖರ

---

೧) ೯ನೇ ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಭಾಷಣ. ಪುಟ-೯-೧೦. ವರ್ಷ ೨೦೦೮.

ಪಾಟೀಲ, ಪುರುಷೋತ್ತಮ ಬಿಳಿಮಲೆ, ರಹಮತ ತರಿಕೇರೆ, ಗೋರುಚ, ಜಿ.ಎಸ್. ಸಿದ್ಧಲಿಂಗಯ್ಯ, ಪಾಟೀಲ ಪುಟ್ಟಪ್ಪ, ಸಿಂಪಿ ಲಿಂಗಣ್ಣ, ಡಾ. ಸಂಗಮೇಶ ಸವದತ್ತಿಮಠ, ಡಾ. ವೀರಣ್ಣ ದಂಡೆ, ಡಾ. ಚನ್ನಣ್ಣ ವಾಲೀಕಾರ, ಡಾ. ಬಸವರಾಜ ಸಬರದ"[೧] ಮುಂತಾದವರು ಈ ಸಮ್ಮೇಳನದಲ್ಲಿ ಭಾಗವಹಿಸಿ ಸಮ್ಮೇಳನವು ಬಹಳ ಯಶಸ್ವಿಯಾಗಲು ಕಾರಣರಾದರು. ಈ ಸಮ್ಮೇಳನವು ಯಶಸ್ವಿಯಾಗಲು ಜಿಲ್ಲಾ ಪಂಚಾಯತ ಅಧ್ಯಕ್ಷರಾದ ಮುರಳಿಧರ ಕಾಳೆ, ಕಲ್ಯಾಣರಾವ ಮೋಳಕೇರೆ, ಜಿ. ನಾರಾಯಣ, ಮಲ್ಲಿಕಾರ್ಜುನ ಸ್ವಾಮಿ, ನಾಗಶೆಟ್ಟಿ ಜೋತೆಪ್ಪನವರ, ಗುರುಸಿದ್ಧಪ್ಪಾ ಸೋಮಶೆಟ್ಟಿ ಮುಂತಾದವರು ಬಹಳ ಶ್ರಮವಹಿಸಿದ್ದರು. ಮತ್ತು ಬೀದರ ಜಿಲ್ಲೆಯ ಎಲ್ಲಾ ಕನ್ನಡ ಸಂಘ ಸಂಸ್ಥೆಗಳು ಭಾಗವಹಿಸಿದ್ದವು.

ಅಲ್ಲದೆ ಜಿ. ಎಸ್. ಸಿದ್ಧಲಿಂಗಯ್ಯನವರ ಕಾರ್ಯಕ್ರಮಗಳು ಎಲ್ಲಾ ತಾಲೂಕಿನಲ್ಲಿ ಏರ್ಪಡಿಸಿದ್ದರು. ಕನ್ನಡಿಗರು ಅವರನ್ನು ಹೃದಯ ಪೂರ್ವಕವಾಗಿ ಸ್ವಾಗತಿಸಿ ಸನ್ಮಾನಿಸಿದರು. ಇದರಿಂದ ಕನ್ನಡತನ ಎಲ್ಲೆಡೆ ಬೆಳೆಯಿತು. ಅಲ್ಲದೆ ಉದಗೀರದಲ್ಲಿ ಹೊರನಾಡು ಕನ್ನಡಿಗರ ಸಮ್ಮೇಳನ ಭವ್ಯವಾಗಿ ಜರುಗಿತು. ಆ ಪ್ರದೇಶದಲ್ಲಿ ಕನ್ನಡಿಗರನ್ನು ಒಂದೆಡೆ ಸೇರಿಸುವಲ್ಲಿ ಪ್ರಾಧ್ಯಾಪಕರಾದ ಮಾಣಿಕರಾವ ಬಿರಾದಾರ ಅವರು ಶ್ರಮವಹಿಸಿದ್ದರು.

ಈ ರೀತಿಯಾಗಿ ಎರಡು ಅವಧಿಯಲ್ಲಿ ಯಶಸ್ವಿಯಾಗಿ ಕೆಲಸ ಮಾಡಿದರು. ಅಲ್ಲದೆ ಕುವೆಂಪು ಕನ್ನಡ ಸಂಘ ಸ್ಥಾಪಿಸಿದರು. ಕಾಶಿನಾಥ ಬೇಲೂರೆ ಅವರ ಕಚೇರಿಯಲ್ಲಿ ಸುಮಾರು ವರ್ಷಗಳ ಕಾಲ ಪ್ರತಿ ವಾರ ಅನೇಕ ಕಾರ್ಯಕ್ರಮಗಳನ್ನು ಜರುಗಿಸಿದರು. ಜಿಲ್ಲಾ ಮಟ್ಟದ ಹಾಡಿನ ಸ್ಪರ್ಧೆಗಳು ಭಾವಗೀತೆಗಳ ಸ್ಪರ್ಧೆಗಳು ಜರುಗಿದ್ದವು. ಜಿಲ್ಲಾ ಪಂಚಾಯತವು ಆಡಳಿತದಲ್ಲಿ ಕನ್ನಡದ ಜೊತೆಗೆ ಇತರ ಭಾಷೆಗಳನ್ನು ಸೇರಿಸಬೇಕೆಂದು ನಿರ್ಣಯಿಸಿದಾಗ ಇದಕ್ಕೆ ಇವರು ವಿರೋಧಿಸಿದ್ದರು. ಅಲ್ಲದೆ ಆರ್ಥಿಕ ತಜ್ಞರು ಹಾಗೂ ಪತ್ರಕರ್ತರು ಆದ ಎಚ್ಚೆಸ್ಕೆ ಅವರನ್ನು ಕರೆಸಿ ಆಡಳಿತದಲ್ಲಿ ಕನ್ನಡ ಭಾಷೆ ಒಂದೇ ಇರಬೇಕೆಂದು ಎಲ್ಲ ಪತ್ರಿಕೆಗಳಲ್ಲಿ ಪ್ರಕಟವಾಗುವಂತೆ ಮಾಡಿದರು. ಅಲ್ಲದೆ ಜಿಲ್ಲಾ ಪಂಚಾಯತದ ನಿರ್ಣಯವನ್ನ ಖಂಡಿಸಲಾಗಿತು. ಈ ಸಂಘದ ಅಡಿಯಲ್ಲಿ ಅನೇಕ ಕಾರ್ಯಕ್ರಮಗಳನ್ನ ಮಾಡಿದ್ದಾರೆ.

ಬೀದರ ಜಿಲ್ಲೆಯ ಮುಖಂಡರು ಸಂಸದರು, ಶಾಸಕರು, ಲೋಕಸಭೆ ಸದಸ್ಯರು ಮುಂತಾದವರು ಆಡಳಿತ ಭಾಷೆಯಾದ ಕನ್ನಡದಲ್ಲಿ ಮಾತಾಡುವುದು ಬಿಟ್ಟು ಬೇರೆ ಭಾಷೆಯಲ್ಲಿ ಮಾತನಾಡುತ್ತಿರುವುದಕ್ಕೆ ಅನೇಕ ಸಲ ವಿರೋಧಿಸಿ ಸಭೆ ಸಮಾರಂಭಗಳನ್ನು ಬಹಿಷ್ಕರಿಸಿದ್ದರು. ಈ ರೀತಿಯಿಂದ ಯುವಕರಲ್ಲಿಯೂ ಕೂಡ ಪ್ರತಿಭಟನೆ ಮಾಡುವ ಜಾಗ್ರತೆ ಮೂಡಿಸಿದ್ದರು.

ಬಸವ ಮಂಟಪದ ಕಾರ್ಯದರ್ಶಿಯಾಗಿ ಸುಮಾರು ದಶಕಗಳು ದುಡಿದಿದ್ದಾರೆ. ಪ್ರತಿ ಶ್ರಾವಣ ಮಾಸದಲ್ಲಿ ಹೊರಗಿನ(ಬಾಂಬೆ-ಕರ್ನಾಟಕ) ಕಡೆಯಿಂದ ಸ್ವಾಮಿಗಳನ್ನು ಆಮಂತ್ರಿಸಿ ಅವರಿಂದ ಕಾರ್ಯಕ್ರಮ ಏರ್ಪಡಿಸುತ್ತಿದ್ದರು. ಪ್ರತಿ ರವಿವಾರ ಬಸವ ಮಂಟಪದಲ್ಲಿ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು. ಶಿವಶರಣರ ಭಾವಚಿತ್ರಗಳನ್ನ ಚಂದ್ರಶೇಖರ ಸೋಮಶೆಟ್ಟಿ ಅವರಿಂದ ಚಿತ್ರಿಸಿ ಅವು ಬಸವ ಮಂಟಪದಲ್ಲಿ ಶೋಭಿಸುವಂತೆ ಮಾಡಿದ್ದರು. ಅಲ್ಲದೆ, ಹರ್ಡೇಕರ ಮಂಜಪ್ಪ, ಹಳಕಟ್ಟಿಯವರ

---

೧) ೯ನೇ ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ಭಾಷಣ. ಪುಟ-೧೦. ವರ್ಷ ೨೦೦೮.

ದಿನಾಚರಣೆ, ಬೀದರ ಜಿಲ್ಲೆಯಲ್ಲಿ ಆಗಿ ಹೋದ ಇತ್ತೀಚಿನ ಶರಣರನ್ನು ಕುರಿತು ಉಪನ್ಯಾಸ ಶಿವಶರಣರ ತತ್ವಗಳ ಕುರಿತು ಉಪನ್ಯಾಸಗಳು ಸ್ಥಳೀಯ ಪ್ರಾಧ್ಯಾಪಕರು ಹಾಗೂ ಹೊರಗಿನಿಂದ ಕರೆಸಿಕೊಂಡ ಉಪನ್ಯಾಸಕರಿಂದ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ಇವೆಲ್ಲ ಕಾರ್ಯಕ್ರಮಗಳಿಗೆ ಬಸವ ಮಂಟಪದ ಅಧ್ಯಕ್ಷರಾದ ಡಾ. ಐ.ಎಸ್. ಕೌಜಲಗಿ ಅವರ ಮಾರ್ಗದರ್ಶನ ಇರುತ್ತಿತ್ತು. ನಾಗಣ್ಣಾ ಜಾಬಶೆಟ್ಟಿ, ಸಂಗ್ರಾಮಪ್ಪಾ ಜಾಬಶೆಟ್ಟಿ, ಮಡಿವಾಳಪ್ಪ ಮುದ್ದಾ ಮುಂತಾದವರು ಬಸವ ಮಂಟಪದ ಎಲ್ಲಾ ಕಾರ್ಯಕ್ರಮಗಳಿಗೆ ತನು-ಮನ-ಧನದಿಂದ ಸಹಕರಿಸುತ್ತಿದ್ದರು. ಸಿಂಪಿ ಲಿಂಗಣ್ಣನವರು ಬಸವ ಮಂಟಪದ ಕಾರ್ಯವನ್ನು ನೋಡಿ ಈ ರೀತಿ ಉದ್ಗರಿಸಿದ್ದಾರೆ. ಹಳಕಟ್ಟಿ ಫಕೀರಪ್ಪನವರ ಭಾವಚಿತ್ರದ ಅನಾವರಣ ಅವರ ಕಾರ್ಯಕ್ಷೇತ್ರವಾದ ವಿಜಾಪುರದಲ್ಲಿ ಆಗುವುಕಕ್ಕಿಂತ ಮೊದಲು ನಿಮ್ಮಲ್ಲಿಯೇ ಆಗಿದೆ ಎಂದು ವರ್ಣಿಸಿದ್ದರೆಂದು ಪಂಚಾಕ್ಷರಿಯವರು ಹೇಳುತ್ತಾರೆ. ಬಸವ ಮಂಟಪದ ಹೆಸರು ಅಂದಿನ ಕಾಲದಲ್ಲಿ ಬೀದರ ಜಿಲ್ಲೆಯಲ್ಲಷ್ಟೆ ಅಲ್ಲದೆ ಎಲ್ಲೆಡೆ ವಿಸ್ತರಿಸಿತ್ತು.

ಶ್ರೀ ಪಂಚಾಕ್ಷರಿಯವರು ಹತ್ತು ವರ್ಷಗಳಿಂದ ವಚನೋತ್ಸವ ಕಾರ್ಯಕ್ರಮವನ್ನು ಕುಂಬಾರಗೇರಿ, ಹೂಗೇರೆ, ಹಳ್ಳದಕೇರಿ, ರಾಂಪೂರೆ ನಗರ, ಬ್ಯಾಂಕ ಕಾಲೋನಿ ಮುಂತಾದ ಕಡೆ ಮನೆ ಮನೆಯಲ್ಲಿ ನಡೆಸುತ್ತಿದ್ದಾರೆ. ಶರಣರ ವಚನವೊಂದನ್ನು ತೆಗೆದುಕೊಂಡು ವಚನದ ಭಾವಾರ್ಥ ಹೇಳುವುದಲ್ಲದೆ ಶಿವಶರಣರ ಬದುಕಿನ ಬಗ್ಗೆ ವಿವರಿಸುತ್ತಾರೆ. ದುಶ್ಚಟಗಳಿಂದಾಗುವ ಹಾನಿ, ನೈತಿಕತೆಯ ಮಹತ್ವ ಮುಂತಾದ ವಿಷಯಗಳನ್ನು ಕುರಿತು ಹೇಳುತ್ತಾರೆ. ಅವರಷ್ಟೇ ಹೇಳುವುದಲ್ಲದೇ ಶರಣ ನಾಡಿನ ಬಲ್ಲವರನ್ನು ಕರೆಸಿ ಅವರಿಂದ ಹೇಳಿಸುತ್ತಾರೆ. ಇದರ ಪರಿಣಾಮ ಜನರಲ್ಲಿ ಮೂಢನಂಬಿಕೆ, ದುರ್ವ್ಯಸನ, ದುಶ್ಚಟಗಳು ಕಡಿಮೆಯಾಗಿವೆ. ಈ ರೀತಿ ಇವರ ಸೇವೆ ತಮ್ಮ ವೃಧ್ಯಾಪ್ಯದಲ್ಲಿಯು ಮುಂದುವರೆದಿದೆ. ಇವರ ಈ ಕಾರ್ಯದಲ್ಲಿ ರಘುನಾಥ ಹಡಪದ ಮತ್ತು ಜಗನಾಥ ಮಹಾರಾಜರು ಸಹಕರಿಸುತ್ತಾರೆ. ಗುಲ್ಬರ್ಗ ವಚನೋತ್ಸವ ಸಮಿತಿಯ ಕೇಂದ್ರದ ಅಧ್ಯಕ್ಷರಾದ ಡಾ. ಬಸವರಾಜ ವೋದಿ ಅವರ ಮಾರ್ಗದರ್ಶನದಿಂದ ಕಾರ್ಯಕ್ರಮಗಳು ನಡೆಯುತ್ತವೆ.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕೇಂದ್ರದ ಅಧ್ಯಕ್ಷರಾದ ಗೋ.ರು.ಚನ್ನಬಸಪ್ಪನವರು ಸುಮಾರು ಹನ್ನೆರುಡು ವರ್ಷಗಳಿಂದ ಬೀದರ ಜಿಲ್ಲೆಯ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರನ್ನಾಗಿ ಶ್ರೀ ಪಂಚಾಕ್ಷರಿಯವರನ್ನು ನೇಮಿಸುತಿದ್ದಾರೆ. ಇವರ ಕಾಲಾವಧಿಯಲ್ಲಿ ಮೂರು ಜಿಲ್ಲಾ ಸಮ್ಮೇಳನಗಳು ಜರುಗಿವೆ. ಮೊದಲೆಯದು ಬಸವಕಲ್ಯಾಣದಲ್ಲಿ ಜನಸೇವಕರಾದ ಮಹಾದೇವಪ್ಪಾ ಮೀಸೆಯವರನ್ನು ಸಮ್ಮೇಳನದ ಅಧ್ಯಕ್ಷರಾಗಿದ್ದರು. ಈ ಸಮ್ಮೇಳನದಲ್ಲಿ ಸಮಾಜ ಸೇವೆ ಮಾಡಿದ ಅನೇಕ ಗಣ್ಯರಿಗೆ ಶಾಲು ಹೊದಿಸಿ ಸನ್ಮಾನಿಸಿದ್ದರು. ಇವರ ಕಾರ್ಯಕ್ರಮಕ್ಕೆ ಬಸವಕಲ್ಯಾಣದ ಪ್ರತಿಷ್ಠಿತ ವ್ಯಕ್ತಿಗಳು ತನು-ಮನ-ಧನದಿಂದ ಸೇವೆ ಮಾಡಿದ್ದರು. ಎರಡನೇ ಸಮ್ಮೆಳನವು ಹುಮನಾಬಾದ ತಾಲೂಕಿನ ಬಸವತೀರ್ಥದಲ್ಲಿ ಅಕ್ಕ ಅನ್ನಪೂರ್ಣ ಅವರ ಅಧ್ಯಕ್ಷತೆಯಲ್ಲಿ ನೆರವೇರಿತು. ಹುಮನಾಬಾದ ತಾಲೂಕಿನ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಡಾ. ಸೋಮನಾಥ ಯಾಳವಾರ ಅವರು ಕಾರ್ಯಕ್ರಮ ಯಶಸ್ವಿಗೊಳಿಸುವಲ್ಲಿ ಶ್ರಮವಹಿಸಿದ್ದರು. ಬಸವತೀರ್ಥ ಮಠದ ಪೂಜ್ಯರಾದ ಶ್ರೀ ಸಿದ್ದಲಿಂಗೇಶ್ವರರು ಎಲ್ಲಾ ರೀತಿಯಿಂದ

ಸಮ್ಮೇಳನ ಜರುಗಿಸಲು ಸಹಕರಿಸಿದರು. ಮೂರನೇ ಸಮ್ಮೇಳನವು ಬೀದರದ ರಂಗಮಂದಿರದಲ್ಲಿ ಭಾಲ್ಕಿ ಹಿರೇಮಠದ ಪೂಜ್ಯರಾದ ಬಸವಲಿಂಗ ಪಟ್ಟದ್ದೇವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಮ್ಮೇಳನವು ಗೋ.ರು.ಚನ್ನಬಸಪ್ಪರವರು ಆಗಮಿಸಿದರು. ಅಲ್ಲದೆ ಬೀದರ ಜಿಲ್ಲೆಯ ಶರಣರ ಪರಿಚಯ ಮಾಡಿಕೊಡಲಾಯಿತು. ಈ ಕಾರ್ಯಕ್ರಮದಲ್ಲಿ ಹಣಮಂತಪ್ಪಾ ಪಾಟೀಲ ಗುಣವಂತರಾವ ಮಂಗಳೂರೆ, ಕಲ್ಯಾಣರಾವ ಚಳಕಾಪೂರೆ, ಜಗನಾಥ ಹೆಬ್ಬಾಳೆ ಮುಂತಾದವರು ಶ್ರಮಿಸಿದ್ದರು.

ಇದಲ್ಲದೆ ನಾಲ್ಕು ತಾಲೂಕಾ ಸಮ್ಮೇಳನಗಳನ್ನ ಏರ್ಪಡಿಸಿದ್ದಾರೆ. ಮೊದಲನೆಯದು ಗಂಗಾಂಬಿಕಾ ಪಟೇಲರ ಅಧ್ಯಕ್ಷತೆಯಲ್ಲಿ ರಂಗಮಂದಿರದಲ್ಲಿ. ಎರಡನೆಯದು ಜಿ.ಬಿ. ವಿಸಾಜಿಯವರ ಅಧ್ಯಕ್ಷತೆಯಲ್ಲಿ ಭಾಲ್ಕಿಯಲ್ಲಿ, ಮೂರನೆಯದು ಮಾಣಿಕರಾವ ಧನಶ್ರೀ ಅವರ ಅಧ್ಯಕ್ಷತೆಯಲ್ಲಿ ಇಟಗಾದಲ್ಲಿ. ನಾಲ್ಕನೆಯದು ಡಾ.ಬಸವರಾಜ ಬಲ್ಲೂರ ಅವರ ಅಧ್ಯಕ್ಷತೆಯಲ್ಲಿ ಕೂಡಲಸಂಗಮದಲ್ಲಿ ಬಹಳ ವಿಜೃಂಭಣೆಯಿಂದ ಜರುಗಿದ್ದವು.

೨೦೦೬ ರಲ್ಲಿ ಭಾಲ್ಕಿ ಪಟ್ಟಣದಲ್ಲಿ ಒಂಬತ್ತನೇ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನವು ಜರುಗಿತು. ಕಲ್ಯಾಣ ಕರ್ನಾಟಕದಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ ನಡೆದದ್ದು ಮೊಟ್ಟ ಮೊದಲು ಭಾಲ್ಕಿ ಪಟ್ಟಣದಲ್ಲಿ ನಡೆಯಿತು. ಇದಕ್ಕೆ ಮೊದಲು ಎಂಟು ಸಮ್ಮೇಳನಗಳು ಮೈಸೂರು ಪ್ರಾಂತದ ಕಡೆಯೇ ಜರುಗಿದ್ದವು. ಈ ಸಮ್ಮೇಳನದಿಂದ ಭಾಲ್ಕಿಯ ಕೀರ್ತಿ ರಾಜ್ಯದಾದ್ಯಂತ ಹರಡಿತು. ಸಮ್ಮೇಳನದ ವ್ಯವಸ್ಥೆ ಹಾಗೂ ಶಿಸ್ತು ಕಂಡು ಹಳೆಯ ಮೈಸೂರಿನವರು ಬೆಕ್ಕಸ ಬೆರಗಾದರು. ಈ ಸಮ್ಮೇಳನದ ಅಧ್ಯಕ್ಷರರನ್ನಾಗಿ ಲಿಂ. ಎಮ್.ಎಸ್.ಲಠ್ಠೆ ಅವರನ್ನ ಮಾಡಲಾಗಿತ್ತು. ಶರಣ ಜೀವಿಗಳು ಪವಿತ್ರ ಆತ್ಮರು ಆದ ಲಠ್ಠೆ ಅವರಿಗೆ ಒಂಭತ್ತನೇ ಸಮ್ಮೇಳನದ ಅಧ್ಯಕ್ಷರಾದುದು ಸಾರ್ಥಕವಾಯಿತು. ಈ ಸಮ್ಮೇಳನದ ಗೌರವ ಕಾರ್ಯದರ್ಶಿಯಾಗಿ ಪಂಚಾಕ್ಷರಿಯವರು ಕಾರ್ಯ ನಿರ್ವಹಿಸಿದ್ದರು. ಈ ಸಮ್ಮೇಳನಕ್ಕೆ ಅನೇಕ ಹಿರಿಯ ಸಾಹಿತಿಗಳು ಮತ್ತು ರಾಜಕಾರಣಿಗಳು ಆಗಮಿಸಿದ್ದರು. ಭಾಲ್ಕಿಯ ಶಾಸಕರಾದ ಪ್ರಕಾಶ ಖಂಡ್ರೆ ಮತ್ತು ಇತರರು ಎಲ್ಲಾ ರೀತಿಯ ಸಹಾಯದಿಂದ ಸಮ್ಮೇಳನವು ಯಶಸ್ವಿಯಾಗಿ ಜರುಗಿತು.

**ಅಸ್ಪೃಶ್ಯರ ಬಗ್ಗೆ ಒಲವು:**

ಆದಿಕವಿ ಪಂಪನು ಸಾವಿರ ವರ್ಷಗಳ ಹಿಂದೆಯೇ ಮಾನವಕುಲಂ ತಾನೊಂದೇ ವಲಂ ಎಂದು ಸಾರಿದ್ದಾರೆ. ಅಂದರೆ ಮಾನವರೆಲ್ಲರು ಸಮಾನರು ಇವರಲ್ಲಿ ಭೇಧಭಾವ ಮಾಡಬಾರದು ಎಂಬ ಅರ್ಥವಾಗಿದೆ. ಬಸವಣ್ಣನವರು ಕೂಡ-

ಹಾರುವ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರಾದವರನ್ನೆಲ್ಲ ಒಂದೇ ಎಂಬೆ
ವಿಪ್ರ ಮೊದಲು ಶೋಪಚ ಕಡೆಯಾಗಿ
ಭವಿಯಾದವರನ್ನೆಲ್ಲ ಒಂದೆ ಎಂಬೆ

ಎಂಬ ವಚನ ಹುಟ್ಟಿನಿಂದ ಯಾರು ಬ್ರಾಹ್ಮಣರಾಗುವುದಿಲ್ಲ, ಯಾರು ಶೂದ್ರರಾಗುವುದಿಲ್ಲ,

ಅವರ ನಡೆ ನುಡಿಗಳಿಂದ ಅವರು ಭವಿ ಭಕ್ತರಾಗುತ್ತಾರೆ ಎಂದು ಸಾರಿದ್ದಾರೆ. ಹುಟ್ಟಿನಿಂದ ಕುಲ ಎಣಿಸದಿರಿ ಎಂದು ಘಂಟಾಘೋಷವಾಗಿ ೮೦೦ ವರ್ಷಗಳ ಹಿಂದೆಯೇ ಬಸವಾದಿ ಪ್ರಮಥರು ಹೇಳಿದ ಮಾತು ಇಂದಿನ ಪ್ರಗತಿಪರ ಕಾಲದಲ್ಲಿಯೂ ಜನರ ತಲೆಯಿಂದ ಹೋಗಿಲ್ಲ. ಇದು ಬಹಳ ಖೇದದ ಸಂಗತಿ.

ಶ್ರೀ ಪಂಚಾಕ್ಷರಿಯವರಿಗೆ ಬಾಲ್ಯದಿಂದಲೆ ಈ ಪದ್ಧತಿಯ ಬಗ್ಗೆ ವಿರೋಧವಿತ್ತು. ಅವರ ತೋಟದಲ್ಲಿ ಕೆಲಸ ಮಾಡುವ ಹರಿಜನರೊಡನೆ ಭೇಧಭಾವ ಮಾಡುತ್ತಿರಲಿಲ್ಲ. ಅವರ ತಂದೆಯವರು ಕೂಡ ಹರಿಜನರ ಬಗ್ಗೆ ನಿಕಟವಾದಂತಹ ಸಂಬಂಧ ಇಟ್ಟುಕೊಂಡಿದ್ದರಲ್ಲದೆ ಅಸ್ಪೃಶ್ಯತೆ ಆಚರಿಸುತ್ತಿರಲಿಲ್ಲ. ತಂದೆಯವರ ಪ್ರಭಾವ ಇವರ ಮೇಲಾಯಿತು. ಇವರು ಪ್ರೌಢ ಶಾಲೆಯಲ್ಲಿ ಓದುತ್ತಿರುವಾಗ ಶಾಸಕರಾದ ಮೀನಕೇರಿಯ ವಿ.ಎನ್.ಪಾಟೀಲರು ಐನೋಲಿಯ ಗ್ರಾಮದೇವರ ಮಂದಿರದಲ್ಲಿ ಮತ್ತು ಹನುಮಾನ ದೇವರ ಮಂದಿರದಲ್ಲಿ ಹರಿಜನರಿಗೆ ಪ್ರವೇಶ ಮಾಡಿಸಿದರು. ಮತ್ತು ಅಸ್ಪೃಶ್ಯತೆಯ ವಿರುದ್ಧ ಭಾಷಣ ಮಾಡಿದರು. ಬುದ್ಧಿ ಹೀನರಾದ ಜನರು ವಿರೋಧಿಸಿದ್ದರು. ಆದರೆ ಪುಣ್ಯಶೆಟ್ಟಿಯವರಿಗೆ ಈ ಕಾರ್ಯ ಹಿಡಿಸಿತು.

ತಾವು ಕೂಡ ವಿ.ಎನ್.ಪಾಟೀಲರಂತೆ ಹರಿಜನರೊಂದಿಗೆ ಮಂದಿರ ಪ್ರವೇಶ ಮಾಡಿದ್ದರು. ಬೇಮಳ ಖೇಡದ ಉರಿಲಿಂಗ ಪೆದ್ದಿ ಮಠದ ಸಿ.ಜಿ. ಸ್ವಾಮಿಗಳು ತಮ್ಮ ಶಿಷ್ಯರೊಂದಿಗೆ ಆಗಮಿಸಿ ಮಂದಿರ ಪ್ರವೇಶ ಮಾಡಿದರು. ಆ ಸಂದರ್ಭದಲ್ಲಿ ಪಂಚಾಕ್ಷರಿಯವರು ತಮ್ಮ ಬಾಲಭಾಷೆಯಲ್ಲಿ ಭಾಷಣ ಮಾಡಿದ್ದರು. ಅವರ ಈ ಕಾರ್ಯಕ್ಕೆ ಕೆಲವು ಜನರು ನಿಂದಿಸಿದ್ದರು. ಆದರು ಅದಕ್ಕೆ ಅವರು ಸೊಪ್ಪು ಹಾಕಲಿಲ್ಲ.

ಶ್ರೀ ಪಂಚಾಕ್ಷರಿಯವರು ಪ್ರಾಥಮಿಕ ಶಿಕ್ಷಕರಾಗಿದ್ದಾಗ ಧುಮ್ಮನಸೂರಿನ ನಾವದಗಿ ರೇವಪಯ್ಯನವರ ಗುಡಿಯಲ್ಲಿ ಅಸ್ಪೃಶ್ಯ ವಿದ್ಯಾರ್ಥಿಗಳಿಗೆ ಪ್ರವೇಶ ಮಾಡಿಸಿ ಸಹಪಂಕ್ತಿಯಲ್ಲಿ ಕೂಡಿಸಿ ಭೋಜನ ಮಾಡಿಸುತ್ತಿದ್ದರು. ಇವರು ಖಟಕ ಚಿಂಚೋಳಿಯಲ್ಲಿದ್ದಾಗ ಹರಿಜನರ ಕೇರಿಯಲ್ಲಿ ಹೋಗಿ ಅವರ ಮಕ್ಕಳಿಗೆ ವಿದ್ಯೆ ಕಲಿಸುವುದರ ಬಗ್ಗೆ ಪಾಲಕರು ಆಸಕ್ತಿ ವಹಿಸಬೇಕು. ಸ್ವಚ್ಛತೆ ಕಾಪಾಡಬೇಕು. ಶಾಲೆಗೆ ಕಳುಹಿಸಬೇಕೆಂದು ಹೇಳುತ್ತಿದ್ದರು. ಅಂದಿನ ಕಾಲದಲ್ಲಿ ರಾತ್ರಿ ಶಾಲೆಗಳಿರಲಿಲ್ಲ.ಆದರೆ ಇವರು ಹರಿಜನರ ಕೇರಿಯಲ್ಲಿ ವಯಸ್ಕರಿಗಾಗಿ ರಾತ್ರಿ ಶಾಲೆ ಪ್ರಾರಂಭಿಸಿದರು. ಮತ್ತು 'ಗಾಂಧಿ ಆಶ್ರಮ' ಸ್ಥಾಪಿಸಿದರು. ಇವರ ಕಾರ್ಯದಲ್ಲಿ ಖಟಕ ಚಿಂಚೋಳಿಯ ಸಿದ್ರಾಮಪ್ಪನವರು ಸಹಕರಿಸಿದರು. ಇವರು ಆಧ್ಯಾತ್ಮಿಕ ವಿಷಯದಲ್ಲಿ ಆಸಕ್ತಿಯುಳ್ಳವರಾಗಿದ್ದರು ಮತ್ತು ತತ್ವ ಪದಕಾರರಾಗಿದ್ದರು. ಇದಲ್ಲದೆ ತೂಗಾಂವದಲ್ಲಿ ಕೂಡ ಅಸ್ಪೃಶ್ಯ ಹರಿಜನ ವಿದ್ಯಾರ್ಥಿಗಳನ್ನ ಒಟ್ಟಿಗೆ ಕೂಡಿಸಿ ಪಾಠ ಮಾಡಲು ಪ್ರಾರಂಭಿಸಿದರು. ಅವರೊಂದಿಗೆ ಭೋಜನ ಮಾಡುತ್ತಿದ್ದರು. ಅಲ್ಲದೆ ಪರಸ್ಪರ ನೀರು ಕುಡಿಸುತ್ತಿದ್ದರು. ಹೀಗೆ ಶ್ರೀ ಪಂಚಾಕ್ಷರಿಯವರು ಅನೇ ಕಾರ್ಯಕ್ರಮಗಳು ಮತ್ತು ಜೀವಪರ, ಸಮಾಜಪರ ಸಮಾನತೆಯ ಬಗ್ಗೆ ಕಳಕಳಿಯನ್ನ ಹೊಂದಿದ್ದರು.

**ಪತ್ರಿಕಾರಂಗ ಸೇವೆ:**

ಪ್ರಜಾಪ್ರಭುತ್ವವಿದ್ದಲ್ಲಿ ಪತ್ರಿಕಾರಂಗ ಬಹಳ ಮುಖ್ಯವಾಗಿದೆ. ಪ್ರಜಾಪ್ರಭುತ್ವದ ಮೂರು

ಅಂಗಗಳಾದ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ, ಇದರ ಜೊತೆಗೆ ನಾಲ್ಕನೇ ಅಂಗವಾಗಿ ಪತ್ರಿಕಾರಂಗದ ಅವಶ್ಯಕತೆ ಇದೆ. ಪತ್ರಿಕಾ ರಂಗವು ಅಂಕುಶವಿದ್ದ ಹಾಗೆ, ಇವೆಲ್ಲ ಅಂಗಗಳಿಗೆ ಸರಿ ದಾರಿಗೆ ತರುವುದಕ್ಕಾಗಿ ಇದು ಬಳಸಬೇಕು. ಇಲ್ಲದಿದ್ದರೆ ಸ್ವೆಚ್ಛಾಚಾರ ಬೆಳೆದು ರಾಜ್ಯ ಅಧೋಗತಿಗೆ ಇಳಿಯುತ್ತದೆ. ಇವು ಮಾಡುವ ಕೆಲಸಗಳ ಮೇಲೆ ಮೇಲಿಂದ ಮೇಲೆ ಟೀಕೆ ಟಿಪ್ಪಣೆಗಳು ಬರುತ್ತಿದ್ದರೆ ಅಧಿಕಾರಿಗಳು ಸರಿ ದಾರಿಗೆ ಬರುತ್ತಾರೆ. ಭ್ರಷ್ಟಾಚಾರ, ಸ್ವಜನ ಪಕ್ಷಪಾತ ಮುಂತಾದವುಗಳ ಮೇಲೆ ಪತ್ರಿಕಾ ರಂಗವು ಹಿಡಿತ ಸಾಧಿಸುತ್ತದೆ.

ದುರ್ದೈವದ ಸಂಗತಿ ಎಂದರೆ ಬೀದರ ಜಿಲ್ಲೆಯಲ್ಲಿ ನಿಜಾಮ ಸರ್ಕಾರದ ಕಾಲದಲ್ಲಿ ಯಾವ ಕನ್ನಡ ಪತ್ರಿಕೆಗಳಿರಲಿಲ್ಲ. ಕನ್ನಡಿಗರ ಸ್ಥಿತಿಯನ್ನು ಕೇಳುವವರೇ ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಬೀದರ ನಗರದಲ್ಲಿ ಒಂದು ಪತ್ರಿಕೆ ಪ್ರಾರಂಭವಾಯಿತು. (ಇದಕ್ಕಿಂತ ಮೊದಲು ಒಂದೆರಡು ಪತ್ರಿಕೆಗಳು ಪ್ರಕಟವಾಗಿ ಮಾಯವಾಗಿದ್ದವು) 'ಉತ್ತರ ಕರ್ನಾಟಕ ಪತ್ರಿಕೆ' ಶಿವಶರಣಪ್ಪಾ ವಾಲಿಯವರ ಸಂಪಾದಕತ್ವದಲ್ಲಿ ಹೊರಟಿತ್ತು. ಆದರೆ ಪತ್ರಿಕೆ ಬರೆಯುವವರ ಸಂಖ್ಯೆ ಗಣನೀಯವಾಗಿ ಇರಲಿಲ್ಲ. ಪಂಚಾಕ್ಷರಿ ಪುಣ್ಯಶೆಟ್ಟಿಯವರು ವೃತ್ತಿಯಲ್ಲಿ ಶಿಕ್ಷಕರಾಗಿದ್ದು, ಪ್ರವೃತ್ತಿಯಲ್ಲಿ ಕನ್ನಡ ಬರಹದಲ್ಲಿ ಬಲ್ಲವರಾಗಿದ್ದರು. ಇವರು ಬರೆಯುವ ಹವ್ಯಾಸ ರೂಢಿಸಿಕೊಂಡದ್ದು ಉತ್ತರ ಕರ್ನಾಟಕ ಪತ್ರಿಕೆಯಿಂದ. ಶಿಕ್ಷಕ ವೃತ್ತಿ ಕೈಗೊಳ್ಳುತ್ತಲೆ ಬಿಡುವಿನ ವೇಳೆಯಲ್ಲಿ ಪತ್ರಿಕಾ ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದರು. ಈ ಕೆಲಸಕ್ಕೆ ಯಾವುದೇ ಸಂಭಾವನೆ ಪಡೆಯುತ್ತಿರಲಿಲ್ಲ. ರಾತ್ರಿ ಹನ್ನೆರಡು ಗಂಟೆಯವರೆಗೆ ವರದಿಗಾರರಾಗಿ ಕೆಲಸ ಮಾಡಿದ್ದರು. ಬೀದರನಲ್ಲಿ ಜರಗುವ ಕನ್ನಡದ ಎಲ್ಲ ಚಟುವಟಿಕೆಗಳ ವರದಿ ತಪ್ಪದೆ ಬರೆಯುತ್ತಿದ್ದರು. ವಾರಕ್ಕೊಮ್ಮೆ ವ್ಯಕ್ತಿ ಪರಿಚಯ ಬರೆಯುವುದು ಇವರ ರೂಢಿಯಾಗಿತ್ತು. ಪತ್ರಿಕೆಯಲ್ಲಿ ಬಂದ ವ್ಯಕ್ತಿ ಪರಿಚಯಗಳ ಮೊತ್ತವೇ ಸಜ್ಜನರ ಸಂಗದಲ್ಲಿ ಪುಸ್ತಕವಾಗಿದೆ. ಇನ್ನು ಅನೇಕ ಲೇಖನಗಳು ಪತ್ರಿಕೆಯಲ್ಲಿ ಪ್ರಕಟವಾಗಿವೆ.

**ಪ್ರಶಸ್ತಿ ಮತ್ತು ಗೌರವ:**

ಬ್ರಹ್ಮ ಪದವಿಯನೊಲ್ಲೆ
ರುದ್ರ ಪದವಿಯನೊಲ್ಲೆ
ವಿಷ್ಣು ಪದವಿಯನೊಲ್ಲೆ
ಮತ್ತಾವ ಪದವಿಯನೊಲ್ಲೆನಯ್ಯಾ
ನಿಮ್ಮ ಪಾದವನರಿದಿಪ್ಪ
ಮಹಾಪದವಿಯನೇ ಕರುಣಿಸು.

-ಬಸವಣ್ಣ

ಎಂದು ಬಸವಣ್ಣನವರು ಪ್ರಶಸ್ತಿ, ಪದವಿ, ಗೌರವ ಸ್ಥಾನಗಳಿಗೆ ಅಲ್ಲಗಳೆದಿದ್ದಾರೆ. ಶರಣರಾದವರಿಗೆ ಇವಾವ ಪದವಿಗಳು ಬೇಕಾಗಿಲ್ಲ. ಅವರು ಹೊಗಳಿ ಹೊಗಳಿ ಎನ್ನ ಹೊನ್ನ ಶೀಲಕ್ಕೇರಿಸದಿರಯ್ಯಾ ಎಂದು ಹೊಗಳಿಕೆಗೆ ಮಹತ್ವ ಕೊಟ್ಟಿಲ್ಲ. ಕಿನ್ನರ ಕಂಠದ ಕೋಗಿಲೆಗೆ ಪ್ರಶಸ್ತಿ

ಕೊಟ್ಟವರಾರು ಎಂದು ಮಹಾಕವಿ ಕುವೆಂಪುರವರು ಹೇಳುತ್ತಾರೆ. ಇದರಂತೆ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಪ್ರಶಸ್ತಿ ಮತ್ತು ಗೌರವ ಸನ್ಮಾನಗಳಿಗೆ ಬೆನ್ನ ಹತ್ತಲಿಲ್ಲ. ಆತ್ಮ ಸಂತೃಪ್ತಿಯೇ ಶ್ರೇಷ್ಠವಾದುದು. ಜ್ಞಾನಿಗಳು ನಮ್ಮ ಬದುಕಿನಿಂದ ಸಂತೃಪ್ತರಾದರೆ ಅದೇ ದೊಡ್ಡ ಪ್ರಶಸ್ತಿ ಎನ್ನುತ್ತಾರೆ. ಆದರೆ ವೈಚಾರಿಕವಾಗಿ ಕಾರ್ಯಕರ್ತರಿಗೆ, ಸಾಹಿತಿಗಳಿಗೆ, ಸಂಘ ಸಂಸ್ಥೆಗಳು ಪ್ರಶಸ್ತಿಗಳನ್ನು ಕೊಟ್ಟು ಗೌರವಿಸುತ್ತವೆ. ಅಂತಹ ಗೌರವ ನ್ಯಾಯಯುತವಾಗಿ ಸಿಗುವುದೆಂದು ಹೇಳಲಿಕ್ಕೆ ಬಾರದು. ಕೆಲವು ಸಂದರ್ಭದಲ್ಲಿ ಯೋಗ್ಯರನ್ನ ಕಡೆಗಣಿಸಿ ಅಯೋಗ್ಯರನ್ನ ಮಾಡುವುದುಂಟು. ಆದರೆ ಹಿರಿಯರು ಪ್ರಶಂಸಿಸಿದರೆ ಅದು ನಿಜವಾದ ಪ್ರಶಸ್ತಿಯಾಗುತ್ತದೆ.

ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರಿಗೆ ಹೆಚ್ಚಿನ ಪ್ರಶಸ್ತಿಗಳು ದೊರಕದೆ ಇದ್ದರು ಅವರ ಚಿಕ್ಕ ಗ್ರಂಥಗಳಿಗೆ ವರಕವಿಗಳಾದ ಬೇಂದ್ರೆ, ಬೆಟಗೇರಿ ಕೃಷ್ಣಶರ್ಮ, ಸಿಂಪಿ ಲಿಂಗಣ್ಣ, ಪು.ತಿ.ನರಸಿಂಹಾಚಾರ್ಯ ಅವರ ಪ್ರಶಂಸೆಯ ಮಾತುಗಳು ಅವರಿಗೆ ಹೆಚ್ಚಿನ ಸಂತೃಪ್ತಿ ಉಂಟುಮಾಡುತ್ತವೆಂದು ಹೇಳುತ್ತಾರೆ.

ಔಪಚಾರಿಕವಾಗಿ ಶ್ರೀ ಪಂಚಾಕ್ಷರಿಯವರಿಗೆ ಹಲವು ಪ್ರಶಸ್ತಿ ಗೌರವ ಸನ್ಮಾನಗಳು ಬಂದಿವೆ ಅವುಗಳನ್ನು ಈ ಮುಂದೆ ನಮೂದಿಸಲಾಗಿದೆ.

೧. ಬೀದರ ಜಿಲ್ಲಾ ೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ- ೨೦೦೮.

೨. ಬೀದರದಲ್ಲಿ ನಡೆದ ೭೨ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಶ್ರೀ ಪಂಚಾಕ್ಷರಿಯವರಿಗೆ ಕನ್ನಡ ನಾಡು ನುಡಿ ಸಂಸ್ಕೃತಿಗೆ ಸಲ್ಲಿಸಿರುವ ಗಣನೀಯ ಸೇವೆಯನ್ನು ಪರಿಗಣಿಸಿ ಸಮ್ಮೇಳನದಲ್ಲಿ ಪ್ರಶಸ್ತಿ ನೀಡಿ ಸನ್ಮಾನಿಸಿದ್ದರು-೨೦೦೬.

೩. ಲಿಂಗೈಕ್ಯ ಪೂಜ್ಯ ಶ್ರೀ ಮ.ಘ.ಚ.ಚನ್ನಬಸವ ಪಟ್ಟದೇವರ ಪ್ರತಿವರ್ಷ ಏಪ್ರಿಲ್ ೨೨, ೨೩ ಮತ್ತು ೨೪ ರಂದು ವಿಜೃಂಬಣೆಯಿಂದ ಸ್ಮರಣೋತ್ಸವ ಆಚರಿಸುತ್ತಾರೆ. ಈ ಸಂದರ್ಭದಲ್ಲಿ ಬೀದರ ಜಿಲ್ಲೆಯ ಸಾಹಿತಿಗಳ ಉತ್ತಮ ಕೃತಿಗಳಿಗೆ ಆಯ್ಕೆ ಮಾಡಿ ಪ್ರಶಸ್ತಿ ಕೊಡಲಾಗುತ್ತದೆ. ಇವರಿಗೆ ಡಾ. ಚನ್ನಬಸವ ಪಟ್ಟದ್ದೇವರ ಹೋರಾಟದ ಬದುಕು-ಪುಸ್ತಕಕ್ಕೆ ಪ್ರಶಸ್ತಿ ಮತ್ತು ಹಣ ನೀಡಿ ಗೌರಿವಿಸಿದ್ದಾರೆ. ೨೨.೦೪.೨೦೦೩

೪. ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ ಸುಕ್ಷೇತ್ರ ಹಾರಕೂಡ ವತಿಯಿಂದ ಶ್ರೀ ಚನ್ನವೀರ ಶಿವಾಚಾರ್ಯರು ಚಿಂಚೋಳಿಯ ಹಾರಕೂಡ ಚನ್ನಬಸವೇಶ್ವರ ಮಂದಿರದಲ್ಲಿ ಪ್ರತಿವರ್ಷ ಈ ಭಾಗದಲ್ಲಿ ಶರಣರ ಸೇವೆ ಮಾಡಿದವರಿಗೆ ಮಾತ್ರ ಜಾತ್ರಾ ಸಂದರ್ಭದಲ್ಲಿ ಗೌರವಿಸುತ್ತಾರೆ. ಇಂತಹ ಸಂದರ್ಭದಲ್ಲಿ ಇವರಿಗೆ ಪ್ರಶಸ್ತಿ ನೀಡಿ ಗೌರವಿಸಿದರು.

೫. ರಾಜ್ಯ ಮಟ್ಟದ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಕದಳಿ ಸಮಾವೇಶದಲ್ಲಿ ೬ನೇ ಮಹಿಳಾ ಸಮಾವೇಶದಲ್ಲಿ ಪ್ರಶಸ್ತಿ ನೀಡಿ ಗೌರವಿಸಿದ್ದರು-೨೦೦೮.

೬. ಚಿಂಚೋಳಿ ತಾಲೂಕಿನ ಪ್ರಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ

ಗೌರವಕ್ಕೆ ಪಾತ್ರರಾಗಿದ್ದಾರೆ.

೭. ಚಿಂಚೋಳಿ ತಾಲೂಕಿನ 4ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರಶಸ್ತಿ ನೀಡಿ ಗೌರವಿಸಿದ್ದಾರೆ-೦೩-೦೭-೧೯೯೨.

೮. ಕಲ್ಯಾಣ ಕರ್ನಾಟಕ ಪ್ರಥಮ ಶರಣ ಸಾಹಿತ್ಯ ಸಮ್ಮೇಳನ- ಶ್ರೀ ಗುರು ದುರುದುಂಡೇಶ್ವರ ವಿರಕ್ತಮಠ ಕೊಡೆಕಲ್ಲದಲ್ಲಿ ಉಪಾಧ್ಯಕ್ಷರಾಗಿದ್ದರು-೨೦೦೬.

೯. ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನದ ಪ್ರಧಾನ ಕಾರ್ಯದರ್ಶಿಯಾಗಿದ್ದರು-೨೦೦೬.

೧೦. ಬೀದರ ಜಿಲ್ಲಾ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಅಧ್ಯಕ್ಷರು.

೧೧. ಹುಬ್ಬಳ್ಳಿಯಲ್ಲಿನಡೆದ 59 ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ನೆನಪಿನ ಕಾಣಿಕೆ ನೀಡಿ ಗೌರವಿಸಿದ್ದರು-೧೯೯೦.

೧೨. ಕನ್ನಡ ಸಾಹಿತ್ಯ ಪರಿಷತ್ತು ಜಿಲ್ಲಾ ಅಧ್ಯಕ್ಷರಾಗಿ-೧೯೭೮-೮೧, ೧೯೮೯-೯೨.

೧೩. ಕುವೆಂಪು ಕನ್ನಡ ಸಂಸ್ಥಾಪಕ ಅಧ್ಯಕ್ಷರು-೧೯೮೧

೧೪. ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತದಲ್ಲಿ 8 ವರ್ಷ ಕಾರ್ಯದರ್ಶಿಯಾಗಿ ಸೇವೆ-೧೯೭೮-೭೮

೧೫. ಅಲ್ಲದೆ ಇವರನ್ನ ಬೀದರ ಜಿಲ್ಲೆಯ ಅನೇಕ ಗ್ರಾಮಗಳಲ್ಲಿ ಶಾಲು ಹೊದಿಸಿ ಸನ್ಮಾನಿಸಲಾಗಿದೆ.

ಹೀಗೆ ಶ್ರೀ ಪಂಚಾಕ್ಷರಿಯವರು ಕನ್ನಡದ ಕಾರ್ಯಕ್ರಮಗಳಲ್ಲಿ ತೊಡಗಿಸಿಕೊಂಡು ಸುಮಾರು ೭ ಜೀವನ ಚರಿತ್ರೆಗಳು ಮತ್ತು ಒಂದು ನಾಟಕವನ್ನ ಬರೆದು ಸಾಹಿತ್ಯ ಕೃಷಿ ಗೈದಿದ್ದಾರೆ. ಹೀಗೆ ಇವರ ಕೀರ್ತಿ ರಾಜ್ಯದೆಲ್ಲೆಡೆ ಹರಡಿದೆ. ಇವರು ತಮ್ಮ ವಿನಯಶೀಲತೆಯಿಂದ ಮೆರೆದಿದ್ದಾರೆ. ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ಶರಣರ ವಾಣಿಯೆ ಇವರ ಧ್ಯೆಯವಾಗಿದೆ.

**ವ್ಯಕ್ತಿತ್ವ :**

ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರದು ತುಂಬಾ ಆಕರ್ಶಕ ವ್ಯಕ್ತಿತ್ವ. ಕೆಂಚನೆಯ ದುಂಡುಮುಖ, ಸಾಧಾರಣ ಎತ್ತರದ ನಿಲುವು, ವಿಶಾಲವಾದ ಹಣೆಯ ಮೇಲೆ ವಿಭೂತಿ, ಕೊರಳಲ್ಲೊಂದು ರುಮಾಲು, ಬಗಲಿಗೊಂದು ಕೈಚೀಲ, ಇವರ ವಾಹನ ಸೈಕಲ್ಲು. ಈ ಸೈಕಲ್ಲನ್ನೆ ತುಳಿಯುತ್ತಲೆ ಬೀದರ ಜಿಲ್ಲೆಯಲ್ಲಿ ಕನ್ನಡವನ್ನು ಕಟ್ಟಿದ ಸಾಹಸಿಯಾಗಿದ್ದಾರೆ. ಕನ್ನಡ ಹೋರಾಟಗಾರರಾಗಿ ಇವರು ಸೇವೆ ಮಾಡಿದ್ದು ಮೆಚ್ಚುವಂತಹದ್ದು. ಇವರು ಯಾರ ಹಂಗಿಗೂ ಒಳಗಾಗದೆ ಸತ್ಯಕ್ಕಾಗಿ, ನ್ಯಾಯಕ್ಕಾಗಿ ಪ್ರತಿಭಟಿಸುವ ಗುಣ ಅವರಲ್ಲಿದೆ. ಕನ್ನಡಿಗರಾಗಿದ್ದು ಕನ್ನಡದ ಬಗ್ಗೆ ಅಭಿಮಾನವಿಲ್ಲದ ಯಾರೇ ಆಗಿರಲಿ ಅವರನ್ನು ನೀರ್ಭಿಡೆಯಿಂದ ಖಂಡಿಸುತ್ತಾರೆ. ಇವರಿಗೆ ಕನ್ನಡವನ್ನು ಕಟ್ಟುವಲ್ಲಿ ಸಹಕರಿಸಿದವರೆಂದರೆ ಹಣಮಂತಪ್ಪಾ

ಪಾಟೀಲ, ಗುರಸಿದ್ದಪ್ಪಾ ಸೋಮಶೆಟ್ಟಿ, ನಾಗಶೆಟ್ಟಿ ಜೊತೊಪ್ಪನವರ್ ಮುಂತಾದವರು.

ಶ್ರೀ ಪಂಚಾಕ್ಷರಿಯವರು ಕನ್ನಡಪರ, ಸಾಮಾಜಿಕ ಮತ್ತು ಇನ್ನಿತರ ಯಾವುದೇ ಕಾರ್ಯಕ್ರಮಗಳಿದ್ದರೂ ಅವರು ಸಾಮಾನ್ಯ ಕೆಲಸಗಾರರಂತೆ ಆ ಕಾರ್ಯಕ್ರಮಗಳಲ್ಲಿ ತಮ್ಮನ್ನುತೊಡಗಿಸಿಕೊಳ್ಳುತ್ತಾರೆ. ಬೀದರ ಜಿಲ್ಲೆಯಲ್ಲಿ ಕನ್ನಡ ಉಳಿಸಿ ಬೆಳೆಸುವಲ್ಲಿ ಅನೇಕರು ಶ್ರಮಿಸಿದ್ದಾರೆ. ಅವರಲ್ಲಿ ಇವರು ಒಬ್ಬರು.ಕನ್ನಡ ನೆಲ, ಜಲ, ಭಾಷೆ, ಸಂಸ್ಕೃತಿಯ ವಿಷಯಗಳಿಗೆ ಕುತ್ತು ಬಂದಾಗ ಯಾರೇ ಇರಲಿ ನಿರ್ಭೀಡೆಯಿಂದ ಖಂಡಿಸುವರು.

ಶ್ರೀ ಪಂಚಾಕ್ಷರಿಯವರು ದೇಶದಲ್ಲಿರುವ ಇತರ ಭಾಷೆಗಳನ್ನು ಅಪ್ಪಿಕೊಂಡು ಕನ್ನಡ ಭಾಷೆಯನ್ನು ಪ್ರೀತಿಸುತ್ತಾರೆ. ಆದ್ದರಿಂದ ಕನ್ನಡಕ್ಕಾಗಿ ಅರ್ಧರಾತ್ರಿಗೂ ಸಿದ್ದರಿರುವರು. ಶ್ರೀಯವರು ಹುಟ್ಟು ಹೋರಾಟಗಾರರಾಗಿದ್ದಾರೆ. ಇವರು ಹುಟ್ಟಿನಿಂದಲೆ ಸಂಘಟಿಸುವ ಗುಣವನ್ನು ಪಡೆದುಕೊಂಡು ಬಂದಿದ್ದಾರೆ. ಆದ್ದರಿಂದಲೆ ೧೯೮೧ ರಲ್ಲಿ ಕುವೆಂಪು ಕನ್ನಡ ಸಂಘವನ್ನು ಸ್ಥಾಪಿಸಿ ಅದರಡಿಯಲ್ಲಿ ಅನೇಕ ಕನ್ನಡ ಪರ ಚಟುವಟಿಕೆಗಳನ್ನು ಹಮ್ಮಿಕೊಂಡಿದ್ದಾರೆ. ಇವರು ಯಾವುದೇ ಜಾತಿ ಭೇಧ ಮಾಡದೆ ಎಲ್ಲರೊಂದಿಗೆ ಸಮನಾಗಿ ವ್ಯವಹರಿಸುತ್ತಾರೆ. ಇವರು ಬಹುಮುಖ ಪ್ರತಿಭೆವುಳ್ಳವರಾಗಿದ್ದಾರೆ.

ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಮೊದಮೊದಲು ಕವನಗಳನ್ನು ರಚಿಸಿ ವಾಚನ ಮಾಡುತ್ತಿದ್ದರು. ಮುಂದೆ ಅವರ ಮನಸ್ಸು ಗದ್ಯದ ಕಡೆಗೆ ವಾಲಿದ್ದರಿಂದ ನಾಟಕ ಮತ್ತು ಜೀವನ ಚರಿತ್ರೆಗಳನ್ನು ಬರೆದು ಈಗ ಅವರು ಚರಿತ್ರಕಾರರೆಂದೇ ಪ್ರಸಿದ್ಧರಾಗಿದ್ದಾರೆ.

ಇವರು ಬಾಲ್ಯದಿಂದಲೂ ವಚನಗಳನ್ನು ಅಭ್ಯಾಸ(ಪಠಣ) ಮಾಡುತ್ತಿದ್ದುದರಿಂದ ಇವರ ಮೇಲೆ ಶರಣರ ಪ್ರಭಾವ ಬೀರಿದೆ. ಇವರು ಶರಣರ ತತ್ವಗಳನ್ನು ತಿಳಿದುಕೊಂಡರಲ್ಲದೆ ಅವುಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡರು. ಶ್ರೀ ಪಂಚಾಕ್ಷರಿಯವರು ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ನಾಡಿನ ಖ್ಯಾತ ವಿದ್ವಾಂಸರು, ದಿಗ್ಗಜ ಕವಿಗಳನ್ನು, ಕಾದಂಬರಿಕಾರರನ್ನು, ನಾಟಕಕಾರರನ್ನು ಕರೆಸಿ ಅವರಿಂದ ಬೀದರ ಜಿಲ್ಲೆಯ ಜನತೆಯಲ್ಲಿ ಕನ್ನಡದ ಬೀಜ ಬಿತ್ತಲು ಅವರಿಂದ ಉಪನ್ಯಾಸಗಳನ್ನ ಏರ್ಪಡಿಸಿದರು. ಇದರಿಂದ ಈ ಪ್ರದೇಶದಲ್ಲಿ ಕನ್ನಡದ ವಾತಾವರಣ ನಿರ್ಮಾಣವಾಗಲು ಸಾಧ್ಯವಾಯಿತು. ಹಿರಿಯ ಸಾಹಿತಿಗಳ ಉಪನ್ಯಾಸವನ್ನು ಬೀದರ ಜನತೆಗೆ ಕೇಳುವ ಅವಕಾಶ ಕಲ್ಪಿಸಿಕೊಟ್ಟವರು. ಅಲ್ಲದೆ ಇವರು ಅಧ್ಯಕ್ಷರಿರುವಾಗಲೆ ಮೂರನೇ ಜಿಲ್ಲಾ ಸಾಹಿತ್ಯ ಸಮ್ಮೇಳನವು ಅದ್ದೂರಿಯಿಂದ ಮಾಡಿದ್ದಾರೆ. ಇವರು ಕೊಡಿಸಿರುವ ಉಪನ್ಯಾಸದ ಪ್ರಭಾವ ಬೀದರನ ಯುವಕರ ಮೇಲೆ ಬಿದ್ದು ಕನ್ನಡದ ಜಾಗೃತಿ ಮೊದಲಿಗಿಂತಲೂ ಹತ್ತುಪಟ್ಟು ಹೆಚ್ಚಾಗಿದೆ. ಬೀದರ ಜಿಲ್ಲೆಯಲ್ಲಿ ಮೊಟ್ಟಮೊದಲ ಬಾರಿಗೆ ಇವರ ಕಾಲಾವಧಿಯಲ್ಲೆ ಜಯದೇವಿ ತಾಯಿ ಲಿಗಾಡೆಯವರ ಕುರಿತು ಕವಿಗಳಿಂದ ಕವನಗಳನ್ನು ಸಂಗ್ರಹಿಸಿ ಎಂ.ಜಿ.ಗಂಗನಪಳ್ಳಿಯವರ ಸಂಪಾದಕತ್ವದಲ್ಲಿ ಪ್ರಕಟವಾಗಿದೆ. ಇವರ ಈ ಪ್ರೇರಣೆಯಿಂದ ಯುವಕರಲ್ಲಿ ಕಾವ್ಯ ಬರೆಯುವ ಆಸಕ್ತಿ ಉಂಟಾಯಿತು.

ಶ್ರೀ ಪಂಚಾಕ್ಷರಿಯವರು ಬೀದರ ಜಿಲ್ಲೆಯ ಶರಣರ, ಸಂತರ, ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ಚರಿತ್ರೆಗಳನ್ನು ಸಂಶೋಧಿಸಿ ಅವರ ಜೀವನವನ್ನು ಕುರಿತು ಬರೆದು ಕಣ್ಮರೆಯಾದ ಮಹಾನ ವ್ಯಕ್ತಿಗಳ

ಪರಿಚಯ ಮಾಡಿಕೊಟ್ಟಿದ್ದಾರೆ. ಬೀದರ್ ಜಿಲ್ಲೆಯ ಹಲವಾರು ಕಡೆಗಳಲ್ಲಿ ಭಾಷಣ ಮಾಡಿ ಕನ್ನಡ ಗಡಿ ನುಡಿ ಬಗ್ಗೆ ಜನರಲ್ಲಿ ಹೋರಾಟದ ಮನೋಭಾವ ಉಂಟಾಗುವಂತೆ ಮಾಡಿದ್ದಾರೆ. ಬೀದರ ಜಿಲ್ಲೆಯ ಜನರು ಇವರನ್ನು ಕನ್ನಡದ ಸೇನಾನಿ ಎಂದು ಭಾವಿಸುತ್ತಾರೆ.

ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಜಿಲ್ಲಾ ಘಟಕದ ಅಧ್ಯಕ್ಷರಾಗಿ ಸುಮಾರು ಹನ್ನೊಂದು ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ. ಇವರ ನೇತೃತ್ವದಲ್ಲಿ 2006 ರಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನವು ಬಹು ಅದ್ದೂರಿಯಿಂದ ನೆರವೇರಿಸಿದರು. ಅಲ್ಲದೆ ನಾಲ್ಕು ತಾಲೂಕಾ ಸಮ್ಮೇಳನಗಳು, ಮೂರು ಜಿಲ್ಲಾ ಸಮ್ಮೇಳನಗಳು ಯಶಸ್ವಿಯಾಗಿ ಜರುಗಿದುದ್ದು ನೋಡಿದರೆ ಇವರ ವ್ಯಕ್ತಿತ್ವ ಎಂಥದೆಂದು ತಿಳಿದು ಬರುತ್ತದೆ.

ಶ್ರೀ ಪಂಚಾಕ್ಷರಿಯವರು ವೃತ್ತಿಯಲ್ಲಿ ವ್ಯಾಯಾಮ ಶಿಕ್ಷಕರಾದರೂ ಪ್ರವೃತ್ತಿಯಲ್ಲಿ ಕನ್ನಡದ ಸೇನಾನಿಯಾಗಿದ್ದಾರೆ. ಸಾಹಿತಿಗಳಾದ ಬೆಟಗೇರಿ ಕೃಷ್ಣಶರ್ಮ, ದ.ರಾ.ಬೇಂದ್ರೆ, ಬಸವಣ್ಣನವರ ವಚನಗಳು, ಶರಣರ ಜೀವನ ಇವರ ಮೇಲೆ ಗಾಢವಾದ ಪ್ರಭಾವ ಬೀರಿವೆ. ಸಮಾಜ ಸುಧಾರಣೆ ದೃಷ್ಟಿಯಿಂದ ಜನರಲ್ಲಿರುವ ಮೂಢನಂಬಿಕೆ, ಅಂಧ ವಿಶ್ವಾಸ, ಅಸ್ಪೃಶ್ಯತೆ, ದುಶ್ಚಟಗಳನ್ನ ದೂರಮಾಡಲು ಪರಿಶ್ರಮ ಪಟ್ಟಿದ್ದಾರೆ. ಸುಮಾರು ಹತ್ತು ವರ್ಷಗಳಿಂದ ಡಾ. ಬಸವರಾಜ ಮೋದಿ ಅವರ ಮಾರ್ಗದರ್ಶನದಲ್ಲಿ ಬೀದರ ನಗರ ಹಾಗು ಸುತ್ತಮುತ್ತಲಿನ ಗ್ರಾಮಗಳಲ್ಲಿ ವಚನೋತ್ಸವ ಕಾರ್ಯಕ್ರಮಗಳ ಮೂಲಕ ಶರಣರ ತತ್ವಗಳನ್ನ ಬೀರುತ್ತಲಿದ್ದಾರೆ.

ಶ್ರೀ ಪಂಚಾಕ್ಷರಿಯವರಿಗೆ ಕುಟುಂಬದ ಬಗ್ಗೆ ಹೆಚ್ಚಿನ ಆಸಕ್ತಿ ಇಲ್ಲ. ಸದಾ ಕನ್ನಡ ಪರ ಚಟುವಟಿಕೆಗಳು, ಶರಣರ ತತ್ವ ಪ್ರಸಾರ ಗ್ರಂಥಗಳನ್ನ ಓದುವುದು ಮುಂತಾದವುಗಳು ಇವರ ಹವ್ಯಾಸಗಳಾಗಿವೆ. ಇವರು ದುಶ್ಚಟಗಳಿಂದ ಬಹೂದೂರ.

ಬೀದರ ಜಿಲ್ಲೆಗೆ ವರ್ಗವಾಗಿ ಬಂದಂತಹ ಅನೇಕ ಕನ್ನಡ ಉಪನ್ಯಾಸಕರಿಗೆ ವೇದಿಕೆಯನ್ನು ಒದಗಿಸಿ ಕೊಟ್ಟವರಲ್ಲಿ ಇವರೇ ಪ್ರಮುಖರು. "ಕರಾವಳಿ ಕರ್ನಾಟಕಕ್ಕೆ ಮದ್ದಣ ಒಬ್ಬ ವ್ಯಾಯಾಮ ಶಿಕ್ಷಕ. ಬೀದರ ಕನ್ನಡಕ್ಕೆ ಪುಣ್ಯಶೆಟ್ಟಿಯೊಬ್ಬರು ವ್ಯಾಯಾಮ ಶಿಕ್ಷಕ. ವ್ಯತ್ಯಾಸವಿಷ್ಟೇ ಮುದ್ದಣ ಸಾಹಿತ್ಯ ಕೃಷಿಯ ಜಟ್ಟಿ, ಪುಣ್ಯಶೆಟ್ಟಿ ಕನ್ನಡ ಹೋರಾಟದ ಜಟ್ಟಿ ಅವರವರ ಕಾರ್ಯವ್ಯಾಪ್ತಿಯಲ್ಲಿ ಮರೆಯಲಾಗದ ವ್ಯಕ್ತಿಗಳು." [೧] ಒಟ್ಟಿನಲ್ಲಿ ಶ್ರೀ ಪಂಚಾಕ್ಷರಿಯವರು ಸರಳ ಹೃದಯ, ಮೃದು ಸ್ನೇಹಮಯ ಸ್ವಭಾವ ಹೊಂದಿದ್ದು ಬೀದರ ಜಿಲ್ಲೆಯ ಕನ್ನಡ ಹೋರಾಟಗಾರರೆಂದು ಪ್ರಸಿದ್ಧರಾಗಿದ್ದಾರೆ.

---

೧) ನಾ ಕಂಡ ನನ್ನವರು, ಲೇ: ದೇಶಾಂಶ ಹುಡಗಿ. ಪುಟ-೭೦

ಅಧ್ಯಾಯ - ಮೂರು

# ಪಂಚಾಕ್ಷರಿ ಪುಣ್ಯಶೆಟ್ಟಿ ಅವರ ಸಾಹಿತ್ಯದ ವಿವೇಚನೆ

★ ನಾಟಕ

- ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ

★ ಜೀವನ ಚರಿತ್ರೆ

- ವಿಶ್ವಪುತ್ಥಳಿ ರೇವಪಯ್ಯನವರು
- ಸಜ್ಜನರ ಸಂಗದಲ್ಲಿ (ವ್ಯಕ್ತಿ ಚಿತ್ರಗಳು)
- ಸಮಾಜವಾದಿ ಹೋರಾಟಗಾರ ವೈಜನಾಥ ಪಾಟೀಲ
- ಮಹಾಯೋಗಿಣಿ ಚಕ್ರಕೋಟಿ ಭಾಯವ್ವ
- ಡಾ. ಚನ್ನಬಸವ ಪಟ್ಟದ್ದೇವರ ಹೋರಾಟದ ಬದುಕು
- ಮಹಾದೇವಪ್ಪಾ ಮೀಸೆ
- ಹುತಾತ್ಮ ಬಸವರಾಜ ಹುಡಗಿ ಅಂದಿನ ಕಾಲಮಾನ

★ ಪತ್ರಿಕೋದ್ಯಮ ಸಾಹಿತ್ಯ

★ ಇತರ ಲೇಖನಗಳು

- ಪ್ರಕಟಿತ
- ಅಪ್ರಕಟಿತ

ಅಧ್ಯಾಯ - ಮೂರು

# ಪಂಚಾಕ್ಷರಿ ಪುಣ್ಯಶೆಟ್ಟಿ ಅವರ ಸಾಹಿತ್ಯದ ವಿವೇಚನೆ

**ನಾಟಕ**

**ನಾಟಕ ಸಾಹಿತ್ಯದ ಪರಂಪರೆ :**

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ನಾಟಕ ೨೦ನೇ ಶತಮಾನದ ಕೊಡುಗೆಯಾಗಿದೆ. ಇದಕ್ಕೆ ಪೂರ್ವ ಸಿದ್ಧತೆಯಂತೆ ಹಿಂದಿನ ಶತಮಾನದಿಂದಲೂ ನೋಡಬಹುದು. ಪರಂಪರೆಯಂತೆ ಜಾನಪದ ರಂಗಭೂಮಿಗೆ ಸಾವಿರಾರು ವರ್ಷಗಳ ಇತಿಹಾಸವಿರಬಹುದಾದರೂ ನಾಟಕವು ಸಾಹಿತ್ಯ ರೂಪಕ್ಕೆ ಬಂದದ್ದು ಸಂಸ್ಕೃತ ನಾಟಕಗಳ ಕನ್ನಡದ ಅನುವಾದದಿಂದ ನಾಟಕ ಸಾಹಿತ್ಯ ಪರಂಪರೆ ಆರಂಭವಾಯಿತು.

ಪ್ರಾಚೀನ ಕಾಲದಲ್ಲಿ ಸಂಸ್ಕೃತವು ನಾಟಕಕ್ಕೆ ಶ್ರೇಷ್ಠವಾದ ಸ್ಥಾನವನ್ನು ನೀಡಿತ್ತು. ಸಂಸ್ಕೃತದ ಅಲಂಕಾರಿಕರು ಕಾವ್ಯವನ್ನು ದೃಶ್ಯ ಮತ್ತು ಶ್ರವ್ಯ ಎಂದು ವಿಂಗಡಿಸಿದ್ದರು. ಸಂಸ್ಕೃತ ನಾಟಕ ಪರಂಪರೆಯಲ್ಲಿ ಅಶ್ವಘೋಷನು ಒಬ್ಬನು. ಇವನು ಮೂರು ಬೌದ್ಧ ನಾಟಕಗಳನ್ನು ರಚಿಸಿದ್ದನು. ಮುಂದೆ ಭಾಸನು ಮತ್ತು ಶೂದ್ರಕನ 'ಮೃಚ್ಛಕಟಿಕ', ಕಾಳಿದಾಸನ 'ಶಾಕುಂತಲ', ವಿಶಾಖದತ್ತನ 'ಮುದ್ರಾರಾಕ್ಷಸ ' ಹೀಗೆ ಸಂಸ್ಕೃತದ ಪ್ರಸಿದ್ಧ ನಾಟಕಗಳು ಹಾಗೂ ನಾಟಕಕಾರರು ಆಗಿದ್ದರು. ಮುಂದೆ ಹರ್ಷವರ್ಧನನು 'ಪ್ರಿಯದರ್ಶಿಕಾ', 'ರತ್ನಾವಳಿ', 'ನಾಗಾನಂದ ' ಎಂಬ ನಾಟಕಗಳನ್ನು ರಚಿಸಿದ್ದನು. ಇವರಂತೆ ಭವಭೂತಿಯು ಮೂರು ನಾಟಕಗಳನ್ನು ರಚಿಸಿದ್ದನು. ಭಟ್ಟನಾರಾಯಣನು 'ವೇಣಿಸಂಹಾರ ' ಎಂಬ ನಾಟಕ ರಚಿಸಿದನು. ಹೀಗೆ ಸಂಸ್ಕೃತ ನಾಟಕ ಪರಂಪರೆಯನ್ನು ನೋಡಬಹುದು.

ನಾಟಕದ ಬಗ್ಗೆ ಕರ್ನಾಟಕದ ಮಟ್ಟಿಗೆ ಹೇಳಬೇಕೆಂದರೆ ಕನ್ನಡದ ಮೊದಲ ಉಪಲಬ್ಧ ಗ್ರಂಥವಾದ 'ಕವಿರಾಜ ಮಾರ್ಗ'ದಲ್ಲಿ ನಾಟಕಕ್ಕೆ ಸಂಬಂಧಿಸಿದ ಕೆಲವು ವಿಚಾರಗಳ ಉಲ್ಲೇಖವನ್ನು ಕಾಣಬಹುದು. ಅದೇ ರೀತಿ 'ವಡ್ಡಾರಾಧನೆಯ ಕಥೆಗಳು' ಎಂಬ ಗ್ರಂಥದಲ್ಲಿ ಕೇವಲಿಗಳ ಚರಿತ್ರೆಯಲ್ಲಿ ನಾಟಕೀಯ ಅಂಶಗಳನ್ನು ಕಂಡಿದ್ದೇವೆ. ಹಾಗೂ ಕನ್ನಡದ ಆದಿಕವಿ ಪಂಪ, ರನ್ನನ ಕಾವ್ಯಗಳಲ್ಲಿಯೂ ನಾಟಕಕ್ಕೆ ಸಂಬಂಧಿಸಿದ ಅಂಶಗಳನ್ನು ಕಾಣಸಿಗುತ್ತವೆ. ಹನ್ನೆರಡನೆಯ ಶತಮಾನದ ಶಿವಶರಣರಾದ ಬಹುರೂಪಿ ಚೌಡಯ್ಯನ ವೃತ್ತಿ ನಾಟ್ಯವಾಗಿತ್ತು ಎಂಬುದು ಅವನ ವಚನಗಳಿಂದ ಕಂಡು ಬರುತ್ತದೆ.

ಹದಿನೇಳನೆಯ ಶತಮಾನದಲ್ಲಿ ಚಿಕ್ಕದೇವರಾಜ ಒಡೆಯರ ಆಸ್ಥಾನ ಕವಿಯಾದ ಸಿಂಗಿರಾರ್ಯನಿಂದ ರಚಿತವಾದ 'ಮಿತ್ರಾವಿಂದ ಗೋವಿಂದ ' ಎಂಬ ನಾಟಕವು ಕನ್ನಡದ ಪ್ರಥಮ ಅನುವಾದ ನಾಟಕವಾಗಿದೆ. ಇದು ಸಂಸ್ಕೃತದ ಶ್ರೀ ಹರ್ಷನಿಂದ ರಚಿತವಾದ 'ರತ್ನಾವಳಿ'ಯ ಅನುವಾದ. ಕನ್ನಡ ನಾಟಕ ಪರಂಪರೆಯಲ್ಲಿ ಕನ್ನಡದ ಮೊದಲ ಸಾಮಾಜಿಕ ನಾಟಕ ಎಂದರೆ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ '.

ನಾಟಕ ಸಾಹಿತ್ಯವು ಹೆಚ್ಚಾಗಿ ರಚನೆಯಾದದ್ದು ೧೯ ನೇ ಶತಮಾನದ ಅಂತ್ಯದಲ್ಲಿ. ಮೈಸೂರಿನ

ಚಾಮರಾಜ ಒಡೆಯರ ಆಸ್ಥಾನ ಕವಿಯಾಗಿದ್ದ ಬಸವಪ್ಪ ಶಾಸ್ತ್ರಿಗಳು ಅನೇಕ ನಾಟಕಗಳನ್ನು ರಚಿಸಿದರು. ಅವರು ಸಂಸ್ಕೃತದ 'ಶಾಕುಂತಲ', 'ವಿಕ್ರಮೋರ್ವಶಿಯ ರತ್ನಾವಳಿ', 'ಉತ್ತರರಾಮ ಚರಿತೆ' ಮೊದಲಾದವುಗಳನ್ನು ಕನ್ನಡಕ್ಕೆ ಅನುವಾದಗೊಳಿಸಿದರು.ಮುಂದೆ ಇಂಗ್ಲೀಷ್ ನಾಟಕಗಳು ಕನ್ನಡಕ್ಕೆ ಅನುವಾದವಾಗ ತೊಡಗಿದವು. ಅವುಗಳಲ್ಲಿ ಶೆಕ್ಸಪಿಯರನ 'ಒಥೆಲೋ'ನಾಟಕ 'ಶೂರಸೇನ' ಚರಿತ್ರೆಯಾಗಿ ಕನ್ನಡಕ್ಕೆ ತಂದರು. ಇಂಗ್ಲೀಷ್‌ನಿಂದ ಕನ್ನಡಕ್ಕೆ ಅನುವಾದಿಸುವಾಗ ಕೆಲವರು ಮೂಲದಲ್ಲಿದ್ದಂತೆ ಕೆಲವರು ರಂಗಭೂಮಿ ದೃಷ್ಟಿಯಲ್ಲಿಟ್ಟುಕೊಂಡು ಅನುವಾದ ಮಾಡಿದರು. ಶೇಕ್ಸಪಿಯರನ 'ಟೆಂಪೆಸ್ಟ್'ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ 'ಬಿರುಗಾಳಿ' ಮತ್ತು 'ಹ್ಯಾಮ್ಲೆಟ್' ನಾಟಕ 'ರಕ್ತಾಕ್ಷಿ'ಯಾಗಿ ಕುವೆಂಪುರವರು ರಚಿಸಿದರು.

ಇಪ್ಪತ್ತನೆಯ ಶತಮಾನದ ನಾಟಕ ಇಂಗ್ಲೀಷ್ ಸಾಹಿತ್ಯದ ಪ್ರೇರಣೆ ಪ್ರಭಾವದಿಂದ ರಚನೆಯಾಗ ತೊಡಗಿದವು. ಈ ಶತಮಾನದ ನಾಟಕವು ರಚನೆ ದೃಷ್ಟಿಯಿಂದ ಸಮಕಾಲೀನ ಕಾಳಜಿಯನ್ನು ಇಟ್ಟುಕೊಂಡು ರಚನೆಯಾಗತೊಡಗಿದವು. ಕೈಲಾಸಂರವರು ವಾಸ್ತವವಾಗಿ ಪರಂಪರೆಯ ಮೊಟ್ಟಮೊದಲ ಮಹತ್ವದ ನಾಟಕರಾರರಾಗಿದ್ದರು. ಅದೇ ರೀತಿ ಶ್ರೀರಂಗರು ಉತ್ತರ ಕರ್ನಾಟಕ ನಾಟಕ ಪರಂಪರೆಯನ್ನು ಧೃಢಗೊಳಿಸಿದರು. ಕೈಲಾಸಂ, ಸಂಸರು, ಶ್ರೀರಂಗರು ನಾಟಕ ಸಾಹಿತ್ಯಕ್ಕೆ ಹೆಚ್ಚು ಒತ್ತು ನೀಡಿದ್ದರು. ಬಿ.ಎಂ.ಶ್ರೀ, ಕುವೆಂಪು, ಮಾಸ್ತಿ, ಪು.ತಿ.ನ.ರವರು ಸಮಕಾಲೀನರಾಗಿ ನಾಟಕ ರಚನೆಯಲ್ಲಿ ತೊಡಗಿದ್ದರು. ಕನ್ನಡ ನಾಟಕ ಪರಂಪರೆಯ ಸುವರ್ಣ ಕಾಲವೆಂದರೆ ಅರವತ್ತರ ದಶಕದಿಂದ ಮುಂದಿನ ಮೂರು ದಶಕಗಳನ್ನು ಗುರುತಿಸಬಹುದು. ಈ ಕಾಲದಲ್ಲಿ ಏಕಾಂಕ ನಾಟಕಗಳು ರಚನೆಯಾಗತೊಡಗಿದವು. ಇವು ಶಾಲಾ ಕಾಲೇಜುಗಳಲ್ಲಿ ವಾರ್ಷಿಕೋತ್ಸವ ಆಚರಣೆಯ ಸಂದರ್ಭದಲ್ಲಿ ಪ್ರಯೋಗಿಸಲೆಂದು ರಚಿಸುತ್ತಿದ್ದರು. ನವ್ಯ ಘಟ್ಟಕ್ಕೆ ಬಂದಾಗ ಚಂದ್ರಶೇಖರ ಕಂಬಾರ, ಚಂದ್ರಶೇಖರ ಪಾಟೀಲ, ಲಂಕೇಶ, ಶಿ. ಮಾ. ಹಿರೇಮಠ ಮುಂತಾದವರು ನಾಟಕಗಳನ್ನು ರಚಿಸಿದ್ದಾರೆ.

ಬಂಡಾಯ ಘಟ್ಟಕ್ಕೆ ಬಂದಾಗ ಸತ್ಯಾನಂದ ಪಾತ್ರೋಟ, ಎಚ್. ಎಸ್.ಶಿವಪ್ರಕಾಶ, ಕೆ.ಎಸ್.ಭಗವಾನ, ಗಿರೀಷ ಕರ್ನಾಡ, ಅರವಿಂದ ಮಾಲಗತ್ತಿ ಮುಂತಾದವರು ನಾಟಕಗಳನ್ನು ಬರೆದಿದ್ದಾರೆ. ಹೀಗೆ ಪ್ರಾಚೀನ ಕಾಲದಿಂದಲೂ ಇಂದಿನ ವರೆಗೆ ತನ್ನ ಇತಿಹಾಸವನ್ನ ಹೊಂದಿರುವ ನಾಟಕ ಶ್ರೀಮಂತ ಪರಂಪರೆಯು ಕನ್ನಡ ಸಾಹಿತ್ಯದಲ್ಲಿ ಕಾಣಬಹುದು."ಇಪ್ಪತ್ತನೇ ಶತಮಾನದ ಕನ್ನಡ ನಾಟಕ ಈ ಶತಮಾನದ ಒಟ್ಟಾರೆ ಸಾಹಿತ್ಯದ ಪರಂಪರೆ ಹಾಗೂ ಸಂಸ್ಕೃತಿಯ ಭಾಗವೆಂಬ ಅರಿವು ವ್ಯಕ್ತವಾಗುತ್ತದೆ." ೧

ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಎಪ್ಪತ್ತರ ದಶಕದ ಏಕಾಂಕ ನಾಟಕಕಾರರ ಪರಂಪರೆಗೆ ಸೇರುತ್ತಾರೆ. ಬೀದರ ಜಿಲ್ಲೆಯಲ್ಲಿ ಪ್ರಥಮ ನಾಟಕ ರಚನೆ ಮಾಡಿ ೧೯೬೩ ರಲ್ಲಿ ಪ್ರಕಟವಾದ ಸ್ವಾತಂತ್ರ ಹುತಾತ್ಮ ಚಂದ್ರಶೇಖರ ಆಜಾದ ನಾಟಕವು ಬೀದರ ಕನ್ನಡದ ಪ್ರಪ್ರಥಮ ಗ್ರಂಥವಾಗಿದೆ ಎಂದು ಬೆಟಗೇರಿ ಕೃಷ್ಣಶರ್ಮರವರು ಹೇಳಿದ್ದಾರೆ.

---

೧) ಶತಮಾನದ ನಾಟಕ. ಸಂ. ಕೆ. ಮರುಳಸಿದ್ದಪ್ಪ. VI

**ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ (ಏಕಾಂಕ) :**

ಭಾರತದ ಸ್ವಾತಂತ್ರ್ಯಕ್ಕಾಗಿ ಅನೇಕ ಮಹನೀಯರು ತಮ್ಮ ಪ್ರಾಣವನ್ನು ತ್ಯಾಗ ಮಾಡಿದ್ದಾರೆ. ಸುಭಾಷ ಚಂದ್ರಬೋಸ, ಸುಖದೇವ, ರಾಜಗುರು ಭಗತಸಿಂಗ, ಬಸವರಾಜ ಹುಡಗಿ, ಲಾಲಾ ಲಜಪತರಾಯ ಇವರ ಸಾಲಿಗೆ ಚಂದ್ರಶೇಖರ ಆಜಾದ ಒಬ್ಬರು, ಇವರೆಲ್ಲರ ಹೋರಾಟದ ಫಲವೇ ಇಂದು ನಾವು ಸ್ವಾತಂತ್ರರಾಗಿರುವುದಕ್ಕೆ ಕಾರಣ. ಸ್ವಾತಂತ್ರ್ಯ ಪೂರ್ವದಲ್ಲಿ ನಾವು ಬ್ರೀಟಿಷರ ಆಡಳಿತಕ್ಕೆ ಒಟಪಟ್ಟಿದ್ದೇವು. ಅಂದು ಈ ಮಹಾನ ವೀರರು ಅವರ ವಿರುದ್ಧ ಹೋರಾಡಿ ನಮ್ಮನ್ನು ಬ್ರಿಟಿಷರ ಬಂಧನದಿಂದ ಬಿಡಿಸಲು ಪ್ರಯತ್ನ ಪಟ್ಟು ಹುತಾತ್ಮರಾದರು. ಈ ಸ್ವಾತಂತ್ರ್ಯ ಹೋರಾಟಗಾರರ ಪ್ರಭಾವವನ್ನು ಲೇಖಕರಾದ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರ ಮೇಲೆ ಗಾಢವಾದ ಪಾರಿಣಾಮವಾಗಿ ತಮ್ಮಲ್ಲಿದ ದೇಶಭಕ್ತಿ ಮತ್ತು ರಾಷ್ಟ್ರ ಪ್ರೇಮ ಕನ್ನಡ ಕಳಕಳಿಯಿಂದ ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ ಎಂಬ ಏಕಾಂಕ ನಾಟಕವನ್ನು ಬರೆದಿದದ್ದಾರೆ. ಇದು ೧೯೬೩ ರಲ್ಲಿ ಪ್ರಕಟವಾಗಿದೆ. ಈ ನಾಟಕವು ಬೀದರ ಕನ್ನಡದ ಮೊದಲ ಸಾಹಿತ್ಯ ಕೃತಿ ಎಂದು ಬೆಟಗೇರಿ ಕೃಷ್ಣಶರ್ಮರವರು ಮುನ್ನುಡಿಯಲ್ಲಿ ಹೇಳಿದ್ದಾರೆ. ಈ ನಾಟಕವು ಬೀದರ ದೇಶಿಯ ಭಾಷೆಯನ್ನು ಒಳಗೊಂಡಿದೆ. ಇದರ ರಚನೆಯ ಉದ್ದೇಶವೇನೆಂದರೆ ಸ್ವಾತಂತ್ರ ಹೋರಾಟಗಾರರ ಆದರ್ಶ, ಅವರ ರಾಷ್ಟ್ರ ಪ್ರೇಮ, ದೇಶ ಪ್ರೇಮವನ್ನು ತಿಳಿಸುವ ಉದ್ದೇಶ ಮತ್ತು ಮುಂದಿನ ಪೀಳಿಗೆಗಳಿಗೆ ಅವರ ಜೀವನವು ದಾರಿದೀಪವಾಗುವುದೆಂಬ ಆಶಯದಿಂದ ರಚಿಸಿದ್ದಾರೆ.

ಈ ನಾಟಕವು ಪ್ರಾರಂಭವಾಗುವುದು ಇಬ್ಬರು ಬಡ ರೈತರಿಂದ. ರೈತರಾದ ಮರಿಯಪ್ಪ ಮತ್ತು ಕರಿಯಪ್ಪ. ಇವರಿಬ್ಬರ ಸಂಭಾಷನೆಯು ನಮ್ಮ ಬೀದರ ಕನ್ನಡ ನುಡಿಯಾಗಿದ್ದುದು ವಿಶೇಷ. ಇವರಿಬ್ಬರ ಸಂಭಾಷಣೆಯಿಂದ ತಿಳಿದು ಬರುವುದೇನೆಂದರೆ ಅಂದಿನ ಕಾಲಮಾನದಲ್ಲಿ ದುಡ್ಡಿಗೆ ಹೆಚ್ಚಿನ ಕಿಮ್ಮತ್ತು ಇದ್ದದ್ದು ಕಂಡು ಬರುತ್ತದೆ. ನಾಟಕದ ಅಭ್ಯಾಸವು ರಾತ್ರಿ ವೇಳೆಯಲ್ಲಿ ನಡೆಯುತ್ತಿದ್ದವೆಂದು ಹೇಳಿದ್ದಾರೆ. ಈ ನಾಟಕವನ್ನು ನೋಡಲು ಈ ಇಬ್ಬರು ರೈತರು ಹೋಗುವ ಪೂರ್ವದಲ್ಲಿ ಇವರ ಸಂಭಾಷಣೆಯಿಂದ ಚಂದ್ರಶೇಖರ ಆಜಾದನ ವರ್ಣನೆಯನ್ನು ಇವರ ಬಾಯಿಂದ ಕೇಳಿದರೆ ಆ ಸನ್ನಿವೇಶಗಳು ಕಣ್ಣ ಮುಂದೆ ಬಂದ ಹಾಗೆ ಚಿತ್ರಿಸಿದ್ದಾರೆ. ರೈತರ ಮಾತುಗಳಿಂದ ದೇಶದ ಮೇಲಿದ್ದ ಅಭಿಮಾನ ಗೌರವವನ್ನು ತಿಳಿದು ಕೊಳ್ಳಲು ಸಹಾಯಕಾರಿಯಾಗಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷರ ಬಂಧನದಿಂದ ಹೊರಬರಲು ಅನೇಕ ವೀರರು ಹೋರಾಡಿದ್ದರು. ಅದರ ಫಲವೇ ನಮಗೆ ಸ್ವಾತಂತ್ರ್ಯ ಬಂದಿತ್ತು. ನಂತರ ಸರಕಾರ ರಚನೆಯಾಗಿತ್ತು. ಅಂದಿನ ಸರ್ಕಾರ, ಜನರು ಮತ್ತು ಅಂದಿನ ಮಕ್ಕಳು ಮಾಡುತ್ತಿರುವ ಕಾರ್ಯ ಚಟುವಟಿಕೆಯ ಬೇಸರವನ್ನು ಲೇಖಕರು ಈ ರೈತರ ಮುಖದಿಂದ ಹೊರಡಿಸಿದ್ದಾರೆ. ಅಲ್ಲಿಂದ ಇಬ್ಬರು ರೈತರು ನಾಟಕವನ್ನ ನೋಡಲು ಹೊರಡುವರು.

ಅಲಿರಾಜ ಪುರದಲ್ಲಿ ಗಂಗಾ, ಚಂದ್ರ, ಗಿರಿಜೆ, ಈ ಮೂವರು ಗೆಳತಿಯರು ನೀರಿಗೆಂದು ಊರ ಹೊರಗಿನ ಕೆರೆಗೆ ಹೋಗಿ ನೀರನ್ನು ತುಂಬಿಕೊಂಡು ಬರುವಾಗ ಒಂದು ಮಗುವು ರಸ್ತೆಯಲ್ಲಿ ಆಡುತ್ತಿರುವುದನ್ನು ಕಂಡು ಈ ಮಗು ಎಷ್ಟು ಮುದ್ದಾಗಿದೆ. ಆದರೆ ಈ ಮಗುವು ಹಾಲು ಸಿಗದ ಕಾರಣ

ರಾತ್ರಿಯಲ್ಲ ಮಲಗುವುದಿಲ್ಲ, ಏಕೆಂದರೆ ಆ ಮಗುವಿನ ತಂದೆ ತಾಯಿಗಳು ಕಡು ಬಡವರಾಗಿದ್ದು, ಈತನಿಗೆ ಒಪ್ಪತ್ತು ಹಾಲು ಕುಡಿಯುವ ಗತಿಯಿಲ್ಲ. ಅಂದರೆ ಅಂದಿನ ಕಾಲದಲ್ಲಿ ಭಾರತದಲ್ಲಿ ಬಡತನವು ತಾಂಡವವಾಡುತ್ತಿತ್ತು, ಬಡವರು ಬಡವರಾಗೆ ಉಳಿದರು. ಶ್ರೀಮಂತರು ಶ್ರೀಮಂತರಾಗೆ ಉಳಿದರು. "ದೇವರಲ್ಲಿ ನ್ಯಾಯವಿಲ್ಲವೋ ಏನೋ? ಹಲ್ಲು ಇದ್ದಲ್ಲಿ ಕಡಲೆ ಇಲ್ಲ ಕಡಲೆ ಇದ್ದಲ್ಲಿ ಹಲ್ಲಿಲ್ಲ"[೧] ಕೆಲವರು ಮಕ್ಕಳು ಎಂದು ಮರುಗುತ್ತಿರುತ್ತಾರೆ ಅಂತಹವರಿಗೆ ಮಕ್ಕಳಾಗುವುದಿಲ್ಲ. ಕೆಲವರಿಗೆ ಮಕ್ಕಳಾಗುತ್ತವೆ ಆದರೆ ಅವುಗಳಿಗೆ ಆಹಾರ ಸಿಗುವುದಿಲ್ಲ. ಈ ಸನ್ನಿವೇಶವು ನೋಡುಗರ ಮನಸ್ಸಿಗೆ ನಾಟುವಂತೆ ಹೃದಯಂಗಮವಾಗಿ ಚಿತ್ರಿಸಿದ್ದಾರೆ, ಅಲ್ಲದೆ ಅಂದು ನೀರಿನ ಸಮಸ್ಯೆಯನ್ನು ಸಹ ಸೂಚ್ಯವಾಗಿ ತಿಳಿಸಿದ್ದಾರೆ.

ಚಿಕ್ಕಂದಿನಲ್ಲಿರುವಾಗ ಚಂದ್ರಶೇಖರ ಆಜಾದರು ತಮ್ಮ ಗೆಳೆಯರಾದ ರವೀಂದ್ರ ಕವೀಂದ್ರ, ಸೂರೇಂದ್ರರೊಡನೆ ದೀಪಾವಳಿಯ ಹಬ್ಬದಂದು ಹೂ ಬಾಣ ಹೊಡೆಯುತ್ತಿರುವಾಗ ಚಂದ್ರಶೇಖರನ ಗೆಳೆಯರು ಹಾರಿಸುವ ಹೂಬಣ್ಣಗಳು ಸರಿಯಾಗಿ ಹತ್ತುತ್ತಿರಲಿಲ್ಲ. ಆಗ ಚಂದ್ರಶೇಖರರು ಅವರಲ್ಲಿದ್ದ ಹೂಬಾಣಗಳನ್ನ ತೆಗೆದುಕೊಂಡು ಹಚ್ಚಿದಾಗ ಬಹಳ ಪ್ರಕಾಶಮಾನವಾಗಿ ಹತ್ತಿಕೊಂಡವು. ಅವು ಹತ್ತಿ ಉರಿಯುತ್ತಿರುವಾಗ ಚಂದ್ರಶೇಖರನ ಅಂಗೈ ಸುಡುತ್ತದೆ. ಆಗ ಅವನ ಗೆಳೆಯರು ಅವರನ್ನು ಆಸ್ಪತ್ರೆಗೆ ಚಿಕಿತ್ಸೆಗೆಂದು ವೈದ್ಯರಲ್ಲಿಗೆ ಒಯ್ಯಲು ಪ್ರಯತ್ನಿಸುತ್ತಾರೆ. ಆಗ ಚಂದ್ರಶೇಖರನು ಇಷ್ಟಕ್ಕೆ ಹಿಂಗಾದರ ಹ್ಯಾಂಗ ಇನ್ನ ಮಾಡಬೇಕಾದ ಸಾಹಸದ ಕೆಲಸ ಇದೆ ಎಂದರು. ಈ ಸನ್ನಿವೇಶದಿಂದ ಅವರಲ್ಲಿದ್ದ ಧೈರ್ಯ ಸಾಹಸವನ್ನು ಲೇಖಕರು ಬಣ್ಣಿಸಿದ್ದಾರೆ. ಅಲ್ಲದೆ ಈಗ ನಮ್ಮ ರಾಷ್ಟ್ರೀಯ ಮಹಾಸಭೆಯ ಮುಂದಾಳುಗಳು ನಮಗೆ ಏನು ಹೇಳುತ್ತಾರೆ ಗೊತ್ತೇನು? ಮಹಾತ್ಮಾ ಗಾಂಧೀ, ಮೋತಿಲಾಲ ನೆಹರು ಚಿತ್ತರಂಜನದಾಸ, ಅವರೆಲ್ಲರು ಕೂಡಿ "ನಮ್ಮನ್ನು ಹೇಳುತ್ತಿರುವುದೇನೆಂದರೆ ನಾವೆಲ್ಲರು ಕೂಡಿ ನಮ್ಮ ಮಾತೃಭೂಮಿಯು ಪರದಾಸ್ಯ ಅಂಬೊ ಬೇಡಿಗಳನ್ನು ಮುರಿದು ಹಾಕಬೇಕಾಗ್ಯಾದ. ಅಪಮಾನದ ಮೃಷ್ಟಾನ್ನಕಿಂತ ಉಪವಾಸ ಮೇಲು. ಇದು ಅಳುಬುರುಕರ ಹೇಡಿಗಳಿಂದ ಆಗೋ ಮಾತಲ್ಲ. ನಾವು ನಮ್ಮ ಶಕ್ತಿಯ ಸಹಾಯದಿಂದಲೇ ಶತ್ರುಗಳನ್ನ ಮಾತೃಭೂಮಿಯಿಂದ ಹೊರಗೆ ಅಟ್ಟಬೇಕಾಗುತ್ತದೆ."[೨] ಎಂಬ ಚಂದ್ರಶೇಖರನ ಮಾತುಗಳನ್ನು ಕೇಳಿದ ಗೆಳೆಯರು ಒಪ್ಪಿ ಹೋರಾಟಕ್ಕೆ ಸಜ್ಜಾಗುವರು. ಅಲ್ಲದೆ ೧೮೫೭ರ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಲಿಯಾದ ಮಹಾರಾಣಿಲಕ್ಷ್ಮಿಬಾಯಿ, ವೀರ ತಾತ್ಯಾಟೋಪಿ, ನಾನಾಸಾಹೇಬ ಪೇಶ್ವೆ, ನರಗುಂದದ ಬಾಬಾಸಾಹೇಬ ಮುಂತಾದವರನ್ನು ನೆನೆದುಕೊಳ್ಳುವರು. ಹೀಗೆ ಬ್ರಿಟಿಷರ ವಿರುದ್ಧ ಹೋರಾಡಲು ಈ ಗೆಳೆಯರು ಸಜ್ಜಾಗಿದ್ದು, ಅವರಲ್ಲಿದ್ದಂತಹ ದೇಶಪ್ರೇಮವನ್ನು ಎತ್ತಿ ಹಿಡಿಯುತ್ತದೆ. ಎಲ್ಲರು ಚಂದ್ರಶೇಖರನಿಗೆ ಜಿಂದಾಬಾದ, ಭಾರತ ಮಾತಾಕಿ ಜೈ ಎನ್ನುವರು. ಈ ಮೇಲಿನ ಅಂಶಗಳನ್ನು ಲೇಖಕರು ಮಾರ್ಮಿಕವಾಗಿ ವಿವರಿಸಿದ್ದಾರೆ.

ಬ್ರಿಟೀಷರ ಸರಕಾರದ ವಿರುದ್ಧ ಜಯಘೋಷ ಮಾಡುತ್ತ ಹೋರಾಡಿದ ಜನ ಸಮೂಹದ ಚಿತ್ರಣವನ್ನು ಮನೋಹರವಾಗಿ ಮೂಡಿಸಿದ್ದಾರೆ. ಹೀಗೆ ಹೊರಟ ಜನ ಸಮೂಹವು -

---

೧) ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ. ಪುಟ-೩

೨) ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ. ಪುಟ-೮

"ಮಹಾತ್ಮಾ ಗಾಂಧೀಕೀ-ಜೈ
ಭಾರತಮಾತಾಕೀ-ಜೈ
ವಿದೇಶಿ ವಸ್ತುಗಳನ್ನು ಸುಟ್ಟುಹಾಕಿರಿ
ವಿದೇಶಿ ರಾಜ್ಯಕ್ಕೆ-ಧಿಕ್ಕಾರವಿರಲಿ
ಸ್ವರಾಜ್ಯವು ನಮ್ಮ ಜನ್ಮಸಿದ್ದ ಹಕ್ಕು."೧

ಎಂಬ ಘೋಷಗಳನ್ನು ಕೂಗುತ್ತಾ ಆನಂದ ಕಂದ ರಿಂದ ರಚನೆಯಾದ ಕವಿತೆಯನ್ನ ಹಾಡುತ್ತ ಪ್ರತಿಭಟನಕಾರರು ಹೊರಟಿರುವರು.

"ಧೀರತೆಯಿಂದಡಿ ಮುಂದಿಡುತೆ, ಬಲು
ಧೀರತೆಯಿಂದಡಿ ಮುಂದಿಡುತೆ,
ಭಾರತ ಭೂಮಿಯ ಬಂಧವನು
ಹಾರಿಸಿ ನಡೆವೆವು ಹಾದಿಯನು!..........." ೨

- ಆನಂದಕಂದ

ಎಂಬ ಕವಿತೆಯಿಂದ ಎಲ್ಲರು ಹುರುಪಿನಲ್ಲಿ ವೀರಾವೇಶದಿಂದ ಹೋಗುತ್ತಿರುವಾಗ ಪೊಲೀಸ ಅಧಿಕಾರಿಗಳು ಬಂದು ಎಲ್ಲರನ್ನು ಚದುರಿಸಲು ಲಾಠಿ ಜಾರ್ಜ ಮಾಡುವರು. ಈ ಲಾಠಿಚಾರ್ಜನಲ್ಲಿ ಅನೇಕರು ನಿರ್ಜೀವಿಗಳಾಗುವರು. ಅನೇಕರಿಗೆ ಗಾಯಗಳಾಗುವವು. ಈ ಗಾಯದ ನಡುವೆಯು ಜನರು ಪೋಲಿಸರನ್ನ ಜರೆಯುತ್ತಿದ್ದರು. ಪೊಲೀಸರು ಭಾರತೀಯರಾಗಿದ್ದು ಈ 'ವೀರರು ನಿಮ್ಮ ಜನ್ಮಕ್ಕೆ ಬೆಂಕಿ ಹಚ್ಚು' ಎಂದು ಆಕ್ರೋಶದಿಂದ ನುಡಿಯುತ್ತಿರುವುದನ್ನು ಲೇಖಕರು ಸೂಕ್ಷ್ಮವಾಗಿ ತಿಳಿಸಿದ್ದಾರೆ. ಇಂತಹ ಗಲಾಟೆಯಲ್ಲಿ ಚಂದ್ರಶೇಖರನು ಪೊಲೀಸ್ ಆಫೀಸರ ಹಣೆಗೆ ಕಲ್ಲಿನಿಂದ ಹೊಡೆದುದರಿಂದ ಪೊಲೀಸ್ ಆಫೀಸರನ ಹಣೆಗೆ ಕಲ್ಲಿನಿಂದ ಹೊಡೆದುದರಿಂದ ಪೋಲೀಸರು ಜಾಗ ಖಾಲಿಮಾಡಿ ಓಡಬೇಕಾಯಿತು. ಆಗ, ಎಲ್ಲರು ಓಡಿಹೋದರು. ಪೋಲಿಸರು ಚಂದ್ರಶೇಖರನನ್ನು ಗುರುತು ಹಿಡಿದಿದ್ದರು.

ಲೇಖಕರು ಚಂದ್ರಶೇಖರ ಇರುವ ಮನೆಯನ್ನು ಬಹಳ ಸುಂದರ ವಾಗಿ ವರ್ಣಿಸಿದ್ದಾರೆ. ಹೀಗೆ ಚಂದ್ರಶೇಖರ ಮನೆಯಲ್ಲಿ ಅವನ ಗೆಳೆಯರಾದ ರವೀಂದ್ರ ಮತ್ತು ಸುರೇಂದ್ರ ಇವರು ಪೋಲಿಸರ ಬಗ್ಗೆ ಮಾತನಾಡುವುದನ್ನ ನೋಡಿದರೆ, ನಮ್ಮ ಜವವಾನರೆ ನಮಗೆ ವಿರೋಧಿಗಳಾಗಿದ್ದರು. ಪೋಲಿಸರು ಬ್ರಿಟಿಷರ ಪಾದ ಸೇವೆಯನ್ನ ಮಾಡುತ್ತ ದಾಸರಾಗಿದ್ದರು. ಇವರಿಂದ ನಮ್ಮ ದೇಶಕ್ಕೆ ಅವಮಾನ, ಸಿಟ್ಟಿನಿಂದ ರವೀಂದ್ರ ಹೇಳುತ್ತಾನೆ. ಈ ಪೋಲಿಸರನ್ನ ರಣಚಂಡಿಗೆ ಆಹುತಿ ಕೊಡೋಣ ಎಂಬ ಮಾತಿನಲ್ಲಿ ಅವರಲ್ಲಿದ್ದ ರೋಷ ರಾಷ್ಟ್ರ ಭಕ್ತಿಯನ್ನ ಲೇಖಕರು ತೋರ್ಪಡಿಸಿದ್ದಾರೆ. ದೇಶದ ಸ್ವಾತಂತ್ರ್ಯಕೋಸ್ಕರ ಬಲಿದಾನವಾಗುವುದಕ್ಕಿಂತ ಹೆಚ್ಚಿನ ಸನ್ಮಾನ ಇಲ್ಲ ಎಂದು ಚಂದ್ರಶೇಖರ ತಿಳಿದಿದ್ದರು. ಈ ಮಾತುಗಳು ಬಣ್ಣಿಸುವಾಗ ಲೇಖಕರು ತಮ್ಮ ಚಾಣಕ್ಷತೆಯನ್ನ ತೋರಿಸಿದ್ದಾರೆ. ನಮ್ಮ ಹಿರಿಯವರಾದ "ಚಂದ್ರಗುಪ್ತ

---

೧) ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ. ಪುಟ-೯
೨) ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ. ಪುಟ-೧೦

ರಾಣಾ ಪ್ರತಾಪಸಿಂಗ, ಪುಲಕೇಶಿ, ಶಿವಾಜಿ ಇವರಿಂದ ಸ್ಫೂರ್ತಿ ಪಡೆದು ಕಳೆದು ಹೋದ ಸ್ವಾತಂತ್ರ್ಯ ಮತ್ತೇ ಪಡೆದರೆ ನಾವು ಭಾರತೀಯರು, ನಮ್ಮ ಸಂಸ್ಕೃತಿ ಭಾರತೀಯರದು ಇಲ್ಲದಿದ್ದರೆ ನಾವು ಹೇಡಿಗಳೆಂದೇ ಸರಿ.''[೧] ಎಂದು ತಿಳಿದಿದ್ದರು. ಆದ್ದರಿಂದ ಅವರು ಮಾನಗೇಡಿಗಳಾಗಿ ಬಾಳುವುದಕ್ಕಿಂತ ಮಾನವಂತರಾಗಿ ಸಾಯುವುದೇ ಮೇಲೆಂದು ನಂಬಿದ್ದರು. ಸುಭಾಷ ಚಂದ್ರ ಬೋಸರ ವಾಣಿಯಂತ ನೀವು ರಕ್ತಕೊಡಿ ನಾನು ನಿಮಗೆ ಸ್ವಾತಂತ್ರ್ಯ ಕೊಡುತ್ತೇನೆ ಎಂದು ತಿಳಿದು 'ಸಾಹಸವೇ ಸಂಪತ್ತಿನ ಮೂಲ' ಎಂದು ಭಾವಿಸಿ ಸ್ವಾತಂತ್ರ್ಯ ಹೋರಾಟಕ್ಕೆ ಹೊರಟದ್ದರು. 'ಮಾಡು ಇಲ್ಲವೇ ಮಡಿ' ಎಂಬ ಕೂಗಿನಿಂದ ಹೋರಾಡಬೇಕೆಂದು ತೀರ್ಮಾನಿಸಿದರು. ಎಲ್ಲರು ಒಂದೇ ಕಡೆ ಇದ್ದರೆ ಒಮ್ಮೆಲೆ ಎಲ್ಲರು ಸಾಯಬೇಕಾಗುತ್ತದೆಂದು ಚಂದ್ರಶೇಖರನು ಗೆಳೆಯರಿಗೆ ಜನರನ್ನು ಸಂಘಟಿಸಲು ಬೇರೆ ಬೇರೆ ಕಡೆ ಕಳಿಸಿದ ದೃಶ್ಯವನ್ನ ಲೇಖಕರು ಕಣ್ಣಿನಲ್ಲಿ ಕಟ್ಟಿದಂತೆ ಚಿತ್ರಿಸಿದ್ದಾರೆ.

ಚಂದ್ರಶೇಖರನು ಮನೆಯಲ್ಲಿರುವಾಗ ಪೊಲೀಸ ಇನ್ಸಪೆಕ್ಟರ ಮತ್ತು ಇಬ್ಬರು ಪೊಲೀಸರು ಬಂದು ಇವನನ್ನ ಗಿರಿಫದಾರ ಮಾಡಿ ಹಿಡಿದುಕೊಂಡು ಹೋಗಿ ಜೈಲಿನಲ್ಲಿರಿಸಿದ್ದರು. ಜೈಲಿನಲ್ಲಿ ಇದ್ದ ಪೋಲಿಸರ ಸಂಭಾಷಣೆಯನ್ನ ನೋಡಿದರೆ ಈ ಇಬ್ಬರು ಪೋಲಿಸರಾದರು ಒಬ್ಬನಿಗೆ ಭಾರತ ಸ್ವಾತಂತ್ರವಾಗುವುದು ಇಷ್ಟ ಇರಲಿಲ್ಲ. ಆದರೆ ಇನ್ನೊಬ್ಬನು ಕೆಲಸಕ್ಕೆ ಕಟ್ಟು ಬಿದ್ದು ಭಾರತೀಯರ ಮೇಲೆ ದಬ್ಬಾಳಿಕೆ ಮಡುತ್ತಿದ್ದನು. ಇವನು ಇದನ್ನ ಖಂಡಿಸುತ್ತಿದ್ದನು. ಆದರೆ ಅವನು ಅದನ್ನ ಸಮ್ಮತಿಸುತ್ತಿದ್ದನ್ನು. ಈ ಇಬ್ಬರ ಸಂಭಾಷಣೆಯು ಮನಸ್ಸಿಗೆ ಮುಟ್ಟುವಂತೆ ಲೇಖಕರು ಅಂದಿನ ಜನರಲ್ಲಿದ್ದ ಗುಣಗಳನ್ನ ಇಲ್ಲಿ ಚಿತ್ರಿಸಿದ್ದಾರೆ. ಲೇಖಕರು ನ್ಯಾಯಲಯದ ಚಿತ್ರಣವನ್ನ ನೀಡಿದ್ದಾರೆ. ಈ ನ್ಯಾಯಾಲಯದಲ್ಲಿ ಚಂದ್ರಶೇಖರನ ವಿಚಾರಣೆಯು ಹೀಗೆ ನಡೆಯುವುದು.

''ನ್ಯಾಯಾಧೀಶ - ನಿನ್ನ ಹೆಸರೇನು?
ಚಂದ್ರಶೇಖರ - ನನ್ನ ಹೆಸರು ಆಜಾದ್
ನ್ಯಾಯಾಧೀಶ - (ಸಿಟ್ಟಿನಿಂದ ತಲೆ ಹಾಕುತ್ತ) ಹೀಗೇನು? ಆಯಿತು ನಿಮ್ಮ ತಂದೆ ಹೆಸರು?
ಚಂದ್ರಶೇಖರ - (ಸಿಟ್ಟಿನಿಂದ) ಸ್ವಾತಂತ್ರ್ಯ
ನ್ಯಾಯಾಧೀಶ - ನಿಮ್ಮ ಮನೆ ಎಲ್ಲಿದೆ?
ಚಂದ್ರಶೇಖರ - ಸೆರೆಮನೆಯೇ ನನ್ನ ಮನೆ.
ನ್ಯಾಯಾಧೀಶ - ಈ ಉದ್ಧತನದ ಮಾತುಗಳನ್ನು ಕೇಳಿದರೆ ಈ ಹುಡುಗನು ತುಂಟನಾಗಿದ್ದಾನೆ. ಇವನಿಗೆ ಹದಿನೈದು ಬೆತ್ತದ ಪೆಟ್ಟುಗಳ ಶಿಕ್ಷೆಯನ್ನು ವಿಧಿಸಿದ್ದೇನೆ ತಿಳಿಯಿತೆ.
ಚಂದ್ರಶೇಖರ - ತಮಗೆ ಧನ್ಯವಾದಗಳು.[೨]

ಈ ಎಲ್ಲ ಮಾತುಗಳಿಂದ ಲೇಖಕರು ಚಂದ್ರಶೇಖರನಲ್ಲಿದ್ದ ಧೈರ್ಯವನ್ನು ಚಿತ್ರಿಸಿದ್ದಾರೆ. ಇಂತಹ

---

೧) ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ. ಪುಟ-೧೪
೨) ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ. ಪುಟ-೨೦

ಲೇಖಕರ ಬಗ್ಗೆ ದ. ರಾ. ಬೇಂದ್ರೆಯವರು ಹೀಗೆ ಹೇಳುತ್ತಾರೆ. "ಪಂಚಾಕ್ಷರಿಯವರು ಸ್ವತಃ ವೀರ ರಸಪ್ರಿಯರು. ದೇಶ ಭಕ್ತರು, ಭಾಷಾ ಭಕ್ತರು, ಹೆಚ್ಚಾಗಿ ಮಾನವೀಯ ಸದ್ಗುಣಗಳನ್ನು ಮೆಚ್ಚುವರು. ಆ ಸತ್ವವು ಈ ಕೃತಿಯಲ್ಲಿ ಬಂದಿದೆ"[೧] ಎಂದು ಹೇಳಿದ್ದಾರೆ. ಚಂದ್ರಶೇಖರನು ಶಿಕ್ಷೆಗೆ ಗುರಿಯಾದಾಗ ಅವನು 'ಭಾರತ ಮಾತಾಕೀ ಜೈ' ಎಂದು ಜೈಕಾರ ಹಾಕುವನು. ಶಿಕ್ಷೆಯನ್ನು ಮುಗಿಯುವಷ್ಟರಲ್ಲಿ ಅವರನ್ನು ಸ್ವಾಗತಿಸಲು ಸಹಸ್ರಾರು ಜನರು ಜೈಲಿನ ಹೊರಗೆ ಕಾಯುತ್ತಿದ್ದರು. ಅವನು ಹೊರಗೆ ಬಂದಾಗ ಜೈಕಾರ ಹಾಕಿ ಅವನನ್ನು ಸ್ವಾಗತಿಸಿದರು. ಈ ಎಲ್ಲ ಅಂಶಗಳನ್ನು ಚಂದ್ರಶೇಖರನ ರಾಷ್ಟ್ರ ಪ್ರೇಮ, ಧೈರ್ಯ ಮತ್ತು ಸ್ವಾತಂತ್ರ್ಯಕ್ಕಾಗಿ ತನ್ನ ಪ್ರಾಣವನ್ನು ಕೊಡಲು ಸಿದ್ಧನಿದ್ದ ಎಂಬುದನ್ನು ತಿಳಿಸಿದ್ದಾರೆ.

ಪತ್ರಿಕೆ ಮಾರುವ ಹುಡುಗನು ಬಿಸಿಬಿಸಿ ಸುದ್ದಿಯಾದ ಸ್ಯಾಂಡ್ರಸನ್ ಮರಣದ ಸುದ್ದಿಯನ್ನು ಹೇಳಿ ಪತ್ರಿಕೆ ಮಾರಲು ಪ್ರಯತ್ನಿಸುತ್ತಿರುವುದನ್ನು ಲೇಖಕರು ಮನೋಹರವಾಗಿ ಅಭಿವ್ಯಕ್ತಿಸಿದ್ದಾರೆ. ಈ ವಿಷಯವನ್ನು ತಿಳಿದ ಗೆಳೆಯರಾದ ಭಾಲು, ಶಾಮನಾಥ ಇಬ್ಬರು ಸ್ಯಾಂಡರಸನ್ ಮರಣದ ಬಗ್ಗೆ ಭಾಲು ಶಾಮನಾಥನಿಗೆ ಸ್ಯಾಂಡರಸನ್ ಮರಣಕ್ಕೆ ಕಾರಣ ಚಂದ್ರಶೇಖರ ಆಜಾದ ಎಂದು ಹೇಳಿದನು. ಆಗ ಶಾಮನಾಥನಿಗೂ ಚಂದ್ರಶೇಖರನ ಮೇಲೆ ಗೌರವ ಇದ್ದುದ್ದನ್ನು ತೋರಿಸಲಾಗಿದೆ. ಚಂದ್ರಶೇಖರನ ವರ್ಣನೆಯನ್ನು ಲೇಖಕರು ಇವರ ಬಾಯಿಂದ ವರ್ಣನಾತ್ಮಕವಾಗಿ ಹೇಳಿದ್ದಾರೆ.

ಚಂದ್ರಶೇಖರ ಕೊನೆಯ ದಿನದಂದು ತನ್ನ ಆಪ್ತ ಸ್ನೇಹಿತನಾದ ಕುಮಾರಸಿಂಹನೊಡನೆ ಮಾತನಾಡುತ್ತಿದ್ದರು. ಗಾಂಧೀಜಿಯ ಇರ್ವಿನ ಒಪ್ಪಂದದ ಬಗ್ಗೆ ಕುಮಾರಸಿಂಹ ಹೇಳುವಾಗ ಚಂದ್ರಶೇಖರನು ನಮ್ಮ ಮತ್ತು ಗಾಂಧೀಜಿಯವರ ಮಾರ್ಗಗಳು ಬೇರೆ ಬೇರೆಯಾಗಿವೆ ಎನ್ನುವಷ್ಟರಲ್ಲಿ ಪೊಲೀಸರ ಆಗಮನವಾಗುವದು. ಆಗ ಚಂದ್ರಶೇಖರನು ತನ್ನ ಗೆಳೆಯನಿಗೆ ಕಳುಹಿಸಿ ಅವರೊಬ್ಬರೆ ಪೊಲೀಸರೊಡನೆ ಹೋರಾಡಿ ತನ್ನಿಂದ ಅವರ್ನನು ಸೋಲಿಸಲು ಸಾಧ್ಯವಿಲ್ಲ ಎಂದು ತಿಳಿದು 'ಸ್ವಾಗತಿಸು ನನ್ನನ್ನು ಭಾರತ ಮಾತೆ' ! ನನ್ನ ಕನಸು ನನಸಾಗದ್ದಕ್ಕಾಗಿ ಕ್ಷಮಿಸು! ವೈರಿಗಳ ಗುಂಡಿನಿಂದ ಮರಣ ಹೊಂದುವುದಕ್ಕಿಂತ ನಾನೇ ಆತ್ಮಹತ್ಯೆ ಮಾಡಿಕೊಳ್ಳುವುದೇ ಲೇಸು ಏನು ಮಾಡಲಿ? ಎಂದು ಹೇಳಿ ತಾನೆ ತನ್ನ ಎದೆಗೆ ಗುಂಡು ಹಾರಿಸಿಕೊಂಡು ಆತ್ಮಾಹುತಿ ಆಮಾಡಿಕೊಳ್ಳುವನು. ಈ ಸನ್ನಿವೇಶವನ್ನು ನೋಡುಗರ ಮೈ ಜುಮ್ಮೆನಿಸುವಂತೆ ರೂಪಿಸಿದ್ದಾರೆ.

**ಭಾಷಾಶೈಲಿ :** ಅಂದಿನ ಕಾಲದಲ್ಲಿ ಬೀದರ ಜಿಲ್ಲೆಯು ಉರ್ದು ಪಾರ್ಸಿಗಳ ಪ್ರಭಾವದಿಂದ ಕನ್ನಡವು ಹೊರಬರಲು ಹವಣಿಸುತ್ತಿತ್ತು. ಈ ನಾಟಕದಲ್ಲಿ ಬೀದರ ಜಿಲ್ಲೆಯ ಭಾಷೆಯನ್ನು ಬಳಸಿದ್ದಾರೆ. ಇದರಲ್ಲಿ ಕೆಲವು ಉರ್ದು ಭಾಷೆಯ ಶಬ್ದಗಳು ಸಹ ಬಂದಿವೆ. ಇದು ಬೀದರ ಕನ್ನಡದಲ್ಲಿ ರಚನೆಯಾದ ಮೊದಲ ಕನ್ನಡ ಕೃತಿಯಾಗಿದೆ ಎಂದು ಹೇಳಬಹುದು.

---

೧) ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ. ಹಾರೈಕೆ

**ಜೀವನ ಚರಿತ್ರೆ :**

**ಜೀವನ ಚರಿತ್ರೆಯ ಪರಂಪರೆ :**

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಜೀವನ ಚರಿತ್ರೆಯು ಇಪ್ಪತ್ತನೆಯ ಶತಮಾನದ ಕೊಡುಗೆಯಾಗಿದೆ. ಇದು ಗದ್ಯದಿಂದ ಕೂಡಿದೆ. ಇಪ್ಪತ್ತನೆಯ ಶತಮಾನಕ್ಕಿಂತಲೂ ಮೊದಲು ಗದ್ಯಕಿಂತ ಹೆಚ್ಚು ಕಾವ್ಯಕ್ಕೆ ಮಹತ್ವವಿತ್ತು. ಜೀವನ ಚರಿತ್ರೆಯನ್ನು ಪ್ರಾಚೀನ ಕಾಲದಿಂದಲೂ ಅಲ್ಲಲ್ಲಿ ನೋಡಬಹುದು. ಈಗಿನ ಹಾಗೆ ಪ್ರತ್ಯೆಕ ಜೀವನ ಚರಿತ್ರೆ ಎಂಬ ಸಾಹಿತ್ಯ ಇರಲಿಲ್ಲ. ಆದರೂ ಅಲ್ಲಲ್ಲಿ ಲೇಖಕರ, ರಾಜ ಮಹಾರಾಜರ, ಜೈನ ಸನ್ಯಾಸಿಗಳ, ಮಹಾತ್ಮರ ಜೀವನ ಅಂಶಗಳನ್ನ ಕಾವ್ಯದ ವಸ್ತುವಾಗಿಸಿಕೊಂಡು ರಚಿಸುತ್ತಿದ್ದರು.

ಹತ್ತನೇ ಶತಮಾನದ ಮಹಾಕವಿಗಳು ಒಂದು ಲೌಕಿಕ ಮತ್ತು ಇನ್ನೊಂದು ಆಗಮಿಕ ಕಾವ್ಯಗಳನ್ನು ರಚಿಸುತ್ತಿದ್ದರು. "ಲೌಕಿಕ ಕೃತಿಗಳು ಆಶ್ರಯದಾತ ರಾಜನ ಚರಿತ್ರೆ. ಸಮಕಾಲೀನ ರಾಜಕೀಯ ಹಾಗೂ ಇತರ ಜೀವನ ಇವನ್ನು ಸೂಚಿಸುವ ಚಾರಿತ್ರಿಕ ಧ್ವನಿ ಕಾವ್ಯಗಳಾಗಿದ್ದವು. ರಾಮಾಯಣ-ಮಹಾಭಾರತ ಪುರಾಣಗಳ ಕಥಾ ವಸ್ತುವನ್ನುಳ್ಳ ಕಾವ್ಯಗಳು ಧ್ವನಿ ರಮ್ಯತೆಗೆ ಆಧಾರವಾಗಿದ್ದವು. ನೇರವಾದ ಚರಿತ್ರೆಯ ಕಾವ್ಯಗಳಿಗಿಂತ ಬೇರೆಯಾದ ಈ ಸರಣಿ ಕನ್ನಡ ಹಾಗೂ ಭಾರತೀಯ ಸಾಹಿತ್ಯಕ್ಕೆ ವಿಶಿಷ್ಟವಾದುದು. ಆಗಮಿಕ ಕಾವ್ಯಗಳು ತೀರ್ಥಂಕರ, ಚಕ್ರವರ್ತಿಗಳ, ಮಹಾಪುರುಷರ ಜೀವನ ಚರಿತ್ರೆಗಾಗಿ, ಜೈನ ಧರ್ಮ ಪ್ರಸಾರಕ್ಕಾಗಿ ಪ್ರಚುರಗೊಂಡಿತ್ತು."[೧] ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ಅವನನ್ನು ಆಶ್ರಯ ನೀಡಿದ ಅರಸನಾದ ಅರಿಕೇಸರಿಯ ಜೀವನದ ಅಂಶಗಳನ್ನು ಬಿಂಬಿಸಿದ್ದಾನೆ. ಹಾಗೂ ಅವನ ಇನ್ನೊಂದು ಕೃತಿಯಾದ ಆದಿಪುರಾಣದಲ್ಲಿ ಮೊದಲನೇ ತೀರ್ಥಂಕರನ ಜೀವನ ಚರಿತ್ರೆಯನ್ನು ಕಾಣಬಹುದು. ಅಲ್ಲದೆ ಪ್ರಪ್ರಥಮ ಗದ್ಯ ಕೃತಿಯಾದ ವಡ್ಡಾರಾಧನೆಯ ಕಥೆಗಳು ಕೃತಿಯಲ್ಲಿ ಅನೇಕ ಕೇವಲಿಗಳ ಜೀವನದ ಅಂಶಗಳನ್ನು ಒಳಗೊಂಡಿದೆ. ಈ ಕೃತಿಯು ಜೀವನ ಚರಿತ್ರೆಯ ಕೃತಿ ಎಂದು ಹೇಳಬಹುದು. ಹೀಗೆ ಅಂದಿನ ಕಾಲದಿಂದಲೂ ಚರಿತ್ರೆಯ ಕಾವ್ಯಗಳು ಪ್ರಾರಂಭವಾಗಿ ಹತ್ತೊಂಭತ್ತನೆಯ ಶತಮಾನದ ವರೆಗೆ ಕಾವ್ಯದಲ್ಲಿಯೇ ಬರತೊಡಗಿದವು. ಇವುಗಳು ಒಂದು ಪ್ರತೇಕ ಸಾಹಿತ್ಯ ಪ್ರಕಾರವಾಗಿರದೆ ಕಾವ್ಯದಲ್ಲಿ ಬರುತ್ತಿತ್ತು.

ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ಅನೇಕ ಪ್ರಕಾರಗಳನ್ನು ಹುಟ್ಟುಕೊಂಡವು. ಅವುಗಳೆಂದರೆ ಕಥೆ, ಕಾದಂಬರಿ, ನಾಟಕ, ಗದ್ಯ ಮುಂತಾದವುಗಳು. ಗದ್ಯ ಸಾಹಿತ್ಯವು ವಿಶಿಷ್ಟ ಸಾಹಿತ್ಯವಾಗಿ ಬೆಳೆದು ಬಂದಿದೆ. ಈ ಗದ್ಯ ಸಾಹಿತ್ಯದಲ್ಲಿ ಜೀವನ ಚರಿತ್ರ, ಆತ್ಮ ಚರಿತ್ರೆ, ಪ್ರವಾಸ ಕಥನ ಮುಂತಾದವುಗಳನ್ನ ಒಳಗೊಂಡಿದೆ. ಜೀವನ ಚರಿತ್ರೆ ಇಪ್ಪತ್ತನೇ ಶತಮಾನಕ್ಕೆ ಹೊಚ್ಚಹೊಸ ರೂಪವಾಗಿ ರಚನೆಯಾಗತೊಡಗಿತು.

ಜೀವನ ಚರಿತ್ರೆಯು ಪಾಶ್ಚತ್ಯರ ಸಾಹಿತ್ಯ ಪ್ರಕಾರದ ಪ್ರಭಾವದಿಂದ ಬಂದ ಸಾಹಿತ್ಯ ಪ್ರಕಾರವಾಗಿದೆ. ಜೀವನ ಚರಿತ್ರೆಗಳು ಸರ್ವೆ ಸಾಮಾನ್ಯವಾಗಿ ಎಲ್ಲ ದೇಶಗಳಲ್ಲಿ ಸಮಾಜದ ಒಳ್ಳೆಯ

---

೧) ಕನ್ನಡ ಸಾಹಿತ್ಯ ಚರಿತ್ರೆ. ಲೇ. ರಂ.ಶ್ರೀ. ಮುಗಳಿ. ಪುಟ-೮೫

ಆದರ್ಶಗಳನ್ನ ಮುಂದಿನ ಪೀಳಿಗೆಗೆ ತಿಳಿಸಲೆಂದು ರಚನೆಯಾಗತೊಡಗಿದವು. ಒಬ್ಬ ವ್ಯಕ್ತಿಯನ್ನ ಒಂದುಗಂ ಕಣ್ಣಲ್ಲಿ ಇಳಿಸುವುದೆ ಈ ಜೀವನ ಚರಿತ್ರೆಯ ಉದ್ದೇಶವಾಗಿದೆ. ಈ ಜೀವನ ಚರಿತ್ರೆ ಒಂದು ದೇಶದ ಇತಿಹಾಸವನ್ನು ತಿಳಿಯಲು ಸಹಾಯವಾಗುವುದು.

**ಚರಿತ್ರಕಾರನಿಗಿರಬೇಕಾದ ಲಕ್ಷಣಗಳು ಈ ಕೆಳಗಿನಂತಿವೆ.**

೧. ಸ್ಪುಟವಾದ, ಮೂರ್ತವಾದ ಬರವಣಿಗ ಶೈಲಿ ಹೊಂದಿರಬೇಕು.

೨. ಸಾಮಗ್ರಿಗಳನ್ನ ಹಲವಾರು ಮೂಲಗಳಿಂದ ಸಂಗ್ರಹಿಸಬೇಕು.

೩. ಸಂಗ್ರಹಿಸಿದ ಸಾಮಗ್ರಿಗಳಿಗೆ ಬೆಲೆಕಟ್ಟುವ ಸಾಮರ್ಥ್ಯ ಮತ್ತು ತಾಳ್ಮೆ ಇರಬೇಕು.

೪. ತಾನು ರಚಿಸುತ್ತಿರುವ ಕೃತಿಯ ನಾಯಕನನ್ನು ಅರ್ಥ ಮಾಡಿಕೊಂಡಿರಬೇಕು.

೫. ಬರೆಯುವಾಗ ಪ್ರಮಾಣಿಕತೆ ಇರಬೇಕು.

೬. ಕಿರಿದರಲ್ಲೆ ಪಿರಿದರ್ಥ ಸೂಚಿಸುವ ಶೈಲಿ ಹೊಂದಿರಬೇಕು.

ಈ ಎಲ್ಲ ಗುಣಗಳನ್ನು ಹೊಂದಿರುವರು ಜೀವನ ಚರಿತ್ರೆಯನ್ನು ರಚಿಸುವುದರಿಂದ ಅವು ಸಾಮಾಜಿಕವಾಗುವುವು. ಇಲ್ಲದಿದ್ದರೆ ಒಬ್ಬ ವ್ಯಕ್ತಿಯ ಪ್ರಚಾರ ಮಾಡುವ ಸಲುವಾಗಿ ರಚಿಸಿದ ಕೃತಿಯಾಗುವವು.

ಆಧುನಿಕ ಕನ್ನಡ ಸಾಹಿತ್ಯಕ್ಕೆ ಬಂದಾಗ ಎಂ.ಎಸ್. ಪುಟ್ಟಣ್ಣನವರ ೧೯೧೦ರಲ್ಲಿ ಕುಣಿಗಲ್ ರಾಮಾಶಾಸ್ತ್ರಿಗಳ ಜೀವನ ಚರಿತ್ರೆ; ಬಿ.ಎಚ್.ಮುನಿಸ್ವಾಮಿಯವರ ರಾಜಯೋಗಿ ಚಿಕ್ಕಲಿಂಗಣ್ಣ ಸ್ವಾಮಿಗಳ ಜೀವನ ಚರಿತ್ರೆ, ವಾಸೂದೇವಯ್ಯನವರ ಆರ್ಯಕೀರ್ತಿ ಡಿ.ವಿ.ಗುಂಟಪ್ಪನವರ ೧೯೧೧ ರಲ್ಲಿ ದಿವಾನ್ ರಂಗಾಚಾರ್ಲು ಮುಂತಾದ ಜೀವನ ಚರಿತ್ರೆಗಳು ಪ್ರಪ್ರಥಮವಾಗಿ ಬಂದಂತೆ ಕಾಣುತ್ತವೆ. ಡಿ.ವಿ. ಗುಂಡಪ್ಪನವರು ಒಬ್ಬ ವ್ಯಕ್ತಿಯ ಜೀವನದ ಘಟನೆಗಳನ್ನ ಚಾರಿತ್ರಿಕವಾಗಿ ರೂಪಿಸುತ್ತಿದ್ದರು. ಮುಂದೆ ಅನೇಕ ಸಾಹಿತಿಗಳಿಗೆ ಜೀವನ ಚರಿತ್ರೆಯು ಇಷ್ಟವಾದ ಸಾಹಿತ್ಯವಾಗಿ ಪರಿಣಮಿಸಿತು. "೧೯೦೧-೧೯೧೪ ರವರೆಗೆ ಹದಿನೇಳು ಜೀವನ ಚರಿತ್ರಗಳು ಪ್ರಕಟವಾದವು. ೧೯೩೫ ರಲ್ಲಿ ಹತ್ತು ಜೀವನ ಚರಿತ್ರಗಳು, ೧೯೩೬ ರಲ್ಲಿ ಹದಿನೇಳು ಜೀವನ ಚರಿತ್ರೆಗಳು, ೧೯೪೭-೧೯೭೨ ರವರೆಗೆ ಸುಮಾರು ೬೧೨ ಜೀವನ ಚರಿತ್ರೆಗಳು ಪ್ರಕಟಗೊಂಡವು."[೧] ಒಂದು ಇವುಗಳಲ್ಲಿ, ಧಾರ್ಮಿಕ ಪುರುಷರು, ರಾಜ ಪುರುಷರು, ವಿಜ್ಞಾನಿಗಳು, ಸಾಹಿತಿ ಕಲಾವಿದರು. ಆತ್ಮ ಚರಿತ್ರಗಳು ವ್ಯಕ್ತಿ ಚಿತ್ರಗಳು ಸಂಭಾವನಾ ಗ್ರಂಥಗಳು ಒಳಗೊಂಡಿದ್ದವು.

ವ್ಯಕ್ತಿ ಚಿತ್ರಣವು ಜೀವನ ಚರಿತ್ರಿಯ ಒಂದು ಭಾಗವಾಗಿದೆ. ಕೃತಿಯ ನಾಯಕನ ಇಡೀ ಜೀವನವನ್ನ ನೋಡದೆ ಅವನ ವ್ಯಕ್ತಿತ್ವವನ್ನ ಇಲ್ಲಿ ಸ್ಪಷ್ಟಗೊಳ್ಳುವ ಉದ್ದೇಶ ಇರುವುದು.

ಜೀವನ ಚರಿತ್ರೆಗಳಲ್ಲಿ ಭಕ್ತಿಯ ಮನೋಭಾವವಷ್ಟೆ ವ್ಯಕ್ತವಾಗುತ್ತಿದ್ದುದು ಕಡಿಮೆಯಾಗಿ ಗೌರವ ಆದರಗಳೊಡನೆ ವಸ್ತು ನಿಷ್ಠ ಬೆಳೆಯುತ್ತಿದೆ. ಎಂ.ಚಿದಾನಂದ ಮೂರ್ತಿಯವರ 'ಬಸವಣ್ಣನವರು' ತಿ.ತಾ.ಶರ್ಮರ 'ಮೋಕ್ಷಗುಂಡಂ' ಇವು ವ್ಯಕ್ತಿ ನಿಷ್ಟ ಜೀವನ ಚರಿತ್ರೆಗಳಾಗಿವೆ. ಸಿದ್ಧವನ ಹಳ್ಳಿಯವರು

೧) ಹೊಸಗನ್ನಡ ಸಾಹಿತ್ಯ ಚರಿತ್ರೆ. ಲೇ. ಎಸ್. ಎಲ್. ಶೇಷಗಿರಿರಾವ. ಪುಟ-೨೩೩

ರಚಿಸಿದ ಜೀವನ ಚರಿತ್ರೆಯ ಪುಟಪುಟದಲ್ಲಿಯೂ ವ್ಯಕ್ತಿಯನ್ನು ಜೀವಂತಗೊಳಿಸುವ ಶೈಲಿಯನ್ನು ಹೊಂದಿದ್ದರು.

ಎನ್.ಕೆ.ನರಸಿಂಹಮೂರ್ತಿಯವರ 'ಮಹಾಜ್ಞಾನಿಗಳು' ಗೌರೀಷ ಕಾಯ್ಕಿಣಿಯವರ 'ಜಗದೀಶ ಚಂದ್ರಬೋಸ' ಸೂ.ಸು.ಬ್ರಹ್ಮಣ್ಯರವರ 'ಅಲೆಕ್ಸಾಂಡರ ಪ್ಲೆಮಿಂಗ', ಎ.ಆರ್.ಕೃಷ್ಣಶಾಸ್ತ್ರಿ ಅವರ 'ಬಂಕಿಂಚಂದ್ರ' ದೇ.ಜೆ.ಗೌಡರ 'ಸಾಹಿತಿಗಳ ಸಂಗದಲ್ಲಿ' ತೀ.ನಂ. ಶ್ರೀ, ಕುವೆಂಪುರವರ, ವಾಸುದೇವಾಚಾರ್ಯರ 'ನಾ ಕಂಡ ಕಲಾವಿದರು' ಪ್ರಭುಶಂಕರವರ 'ಖಲೀಲ ಗಿಬ್ರಾನ್' ಮುಂತಾದ ಇತ್ತೀಚಿನ ಜೀವನ ಚರಿತ್ರೆಗಳಾಗಿವೆ. ಇತ್ತೀಚಿನ ದಿನಗಳಲ್ಲಿ ಸಾಹಿತಿಗಳು, ವಿಜ್ಞಾನಿಗಳು, ರಾಷ್ಟ್ರವನ್ನು ಕಟ್ಟುವಲ್ಲಿ ಭಾಗಿಗಳಾದ ಹಿರಿಯರು ಕುರಿತು ಹೆಚ್ಚು ಹೆಚ್ಚು ಚರಿತ್ರೆಗಳು ಬರುತ್ತಿವೆ. ಡಿ.ವಿ.ಜಿಯವರ 'ಜ್ಞಾಪಕ ಶಾಲೆ' ಮನುಷ್ಯ ಸ್ವಭಾವದ ನಿಜವಾದ ಆಸಕ್ತಿಯನ್ನು ಹುಟ್ಟಿಸುತ್ತದೆ.

ಒಬ್ಬ ವ್ಯಕ್ತಿಯನ್ನು ಕುರಿತು ಬರೆಯುವಾಗ ಭಾಷೆಯಲ್ಲಿ ಲವಲವಿಕೆ ಮೂರ್ತತೆ, ಸ್ಪಷ್ಟತೆ ಇರಬೇಕು, ಕೆಲವೇ ವಾಕ್ಯಗಳಲ್ಲಿ ವ್ಯಕ್ತಿಯ ವ್ಯಕ್ತಿತ್ವವನ್ನು ಸೆರೆ ಹಿಡಿಯುವುದು ಮುಂತಾದವು ಜೀವನ ಚರಿತ್ರೆ ಒಳಗೊಂಡಿದೆ.

ಹೀಗೆ ಜೀವನ ಚರಿತ್ರೆಯ ಇಪ್ಪತ್ತನೇ ಶತಮಾನದಲ್ಲಿ ಒಂದು ಸಾಹಿತ್ಯ ರೂಪವಾಗಿ ಬೆಳೆದು ಬಂದಿದೆ. ಈ ಜೀವನ ಚರಿತ್ರೆಗಳನ್ನು ಬರೆಯುವವರಲ್ಲಿ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಕೂಡ ಒಬ್ಬರು. ಇವರು ಸುಮಾರು ಏಳು ಜೀವನ ಚರಿತ್ರೆಗಳನ್ನು ಬರೆದು ಬೀದರ ಜಿಲ್ಲೆಯಲ್ಲಿ ಚರಿತ್ರಕಾರರೆಂದು ಪ್ರಸಿದ್ಧರಾಗಿದ್ದಾರೆ.

**ವಿಶ್ವ ಪುತ್ಥಳಿ ರೆವಪಯ್ಯನವರು :**

ಪಂಚಾಕ್ಷರಿಯವರು ಮಹಾಶಿವಶರಣರಾದ ನಾವದಗಿ ರೇವಪಯ್ಯನವರ ಚರಿತ್ರೆ ಸರ್ವರಿಗೂ ತಿಳಿಯುವಂತೆ ಬರೆದಿದ್ದಾರೆ, ನಾವದಗಿ ರೇವಪಯ್ಯನವರು ಬಸವಣ್ಣನವರ ಅನುಯಾಯಿಗಳು, ಈ ಶತಮಾನದ ಅತ್ಯಂತ ಮಹಿಮಾನ್ವಿತ ಶರಣರು, ಬೀದರ ಜಿಲ್ಲೆಯಲ್ಲಿ ಇನ್ನು ದಂತ ಕಥೆಯಾಗಿ ಜನರ ಬಾಯಿಯಲ್ಲಿದ್ದಾರೆ. ಬಸವಾದಿ ಶರಣರ ನಂತರ ಏಳುನೂರು ವರ್ಷಗಳ ಪರ್ಯಂತ ಶರಣರ ತತ್ವಗಳನ್ನು ಹೇಳುವವರೆ ಇರಲಿಲ್ಲ. ಈ ಮಹಾ ಮಾನವರು ಹುಟ್ಟಿ ಬಂದ ಮೇಲೆ ಮತ್ತೆ ಶರಣ ತತ್ವಕ್ಕೆ ಜೀವ ಬಂದಿತ್ತು . ಅವರು ತಮ್ಮ ನಡೆ ನುಡಿಗಳ ವರ್ಚಸ್ಸಿನಿಂದ ಜನರ ಮೇಲೆ ಪ್ರಭಾವ ಬೀರಿದ್ದರು. ಪುಣ್ಯಶೆಟ್ಟಿಯವರ ಅವರ ಜೀವನದಲ್ಲಿ ನಡೆದ ಅನೇಕ ಘಟನೆಗಳನ್ನು ಮಾರ್ಮಿಕವಾಗಿ ಬರೆದಿದ್ದಾರೆ. ಪುಸ್ತಕದಲ್ಲಿ ಸೂಕ್ಷ್ಮವಾದ ವಚನಗಳ ಶೀರ್ಷಿಕೆಗಳಿರುವವರಿಂದ ಬರಹಕ್ಕೆ ಇನ್ನಷ್ಟು ಶೋಭೆ ಬಂದಿದೆ. ಈ ಪುಸ್ತಕವು ಜನಪ್ರೀಯವಾದ ಪರಿಣಾಮ ಮೂರು ಸಲ ಮುದ್ರಣಗೊಂಡಿದೆ. ವೀರೆಂದ್ರ ಸಿಂಪಿಯವರು ಲೇಖಕರ ಬಗ್ಗೆ ಹೀಗೆ ಬರೆದಿದ್ದಾರೆ, "ನಾವದಗಿ ರೇವಪಯ್ಯನವರಂತಹ ಪುಣ್ಯ ಜೀವಿಯ ಪರಿಶುದ್ಧ ಜೀವನ ಚರಿತ್ರೆಯನ್ನು ಪರಿಶುದ್ಧ ಜೀವನವನ್ನು ಜೀವಿಸುತ್ತಿರುವ ಲೇಖಕರೆ ಚಿತ್ರಿಸಬಲ್ಲರು. ಪಂಚಾಕ್ಷರಿ ಪುಣ್ಯಶೆಟ್ಟಿ ಅಂತಹ ಸಮರ್ಥ ಲೇಖಕರಲ್ಲಿ ಒಬ್ಬರು." ೧

---

೧) ವಿಶ್ವ ಪುತ್ಥಳಿ ರೇವಪ್ಪಯ್ಯನವರು. ಅಭಿಪ್ರಾಯ.

ಮಹಾತ್ಮರಾದ ರೇವಪಯ್ಯನವರು ೧೮೩೦ ರಲ್ಲಿ ಭಾಲ್ಕಿ ತಾಲೂಕಿನ ನಾವದಗಿ ಎಂಬಲ್ಲಿ ತಂದೆ ಹಾವಯ್ಯ, ತಾಯಿ ನಾಗಮ್ಮ ಇವರ ಉದರದಲ್ಲಿ ಜನ್ಮವೆತ್ತಿ ಬಂದರು. ಇವರ ಮನೆದೇವರು ರಟಕಲ ರೇವಣ ಸಿದ್ದೇಶ್ವರ ಇದ್ದ ಕಾರಣ ಇವರ ಹೆಸರು ರೇವಪಯ್ಯನೆಂದು ಇಟ್ಟರು. ಗೋರ್ಟಾದ ಸಿದ್ಧಲಿಂಗೇಶ್ವರ ಸ್ವಾಮಿಗಳಿಂದ ದೀಕ್ಷೆಯನ್ನ ಪಡೆದಿದ್ದರು. ಈ ಭಾಗದಲ್ಲಿ ಕನ್ನಡ ಕೇವಲ ಆಡುವ ಭಾಷೆಯಾಗಿತ್ತು. ಕಾಲಜ್ಞಾನ ಹೇಳುವವರಿಗೆ ಮಾತ್ರ ಕನ್ನಡ ಭಾಷೆ ಬರುತ್ತಿತ್ತು. ಆದರೆ ರೇವಪಯ್ಯನವರು ಕನ್ನಡ ಭಾಷೆಯಲ್ಲಿ ಪ್ರಭುತ್ವ ಪಡೆದಿದ್ದರು. ಅವರಿಗೆ ಮರಾಠಿ, ಉರ್ದು ಮುಂತಾದ ಭಾಷೆಗಳು ಬರುತ್ತಿದ್ದವೆಂದು ಲೇಖಕರು ಹೇಳುತ್ತಾರೆ.

ವ್ಯಾಸಂಗ ಪ್ರಿಯರಾದ ಇವರು ಹಣ ಕೊಟ್ಟ ತಾಡೋಲೆ ಗ್ರಂಥಗಳನ್ನು ಸಂಗ್ರಹಿಸಿದ್ದರು. ಎಲ್ಲಾ ಭಾಷೆಯ ಪುಸ್ತಕಗಳು ಅವರ ಗ್ರಂಥ ಭಂಡಾರದಲ್ಲಿದ್ದವು. ಇವರ ಜ್ಞಾಪಕ ಶಕ್ತಿ ಅಗಾಧವಾಗಿತ್ತು, ಓದಿದ ಪುಸ್ತಕದ ಪುಟದ ಸಂಖ್ಯೆ ಕೂಡ ಹೇಳುತ್ತಿದ್ದರು, ಯಾರೊಂದಿಗೂ ಕನ್ನಡದಲ್ಲಿಯೇ ಮಾತಾಡುತ್ತಿದ್ದರು, ಅವರ ಭಾಷಾ ಪ್ರೇಮವನ್ನು ಕುರಿತು ಲೇಖಕರು ಬಣಿಸಿದ್ದಾರೆ.

ಹುಮನಾಬಾದಿನ ಮಠಪತಿ ಮನೆತನ ಕನ್ನೆ ರೇವಮ್ಮನವರೊಂದಿಗೆ ಇವರ ವಿವಾಹವಾದದ್ದು ರೇವಪಯ್ಯನವರ ದಾಸೋಹ ಕಾರ್ಯದಲ್ಲಿ ಚಾಚು ತಪ್ಪದೆ ರೇವಮ್ಮ ನಿಯಮ ಪಾಲಿಸುತ್ತಿದ್ದರು. ನಾವದಗಿಯ ಹತ್ತಿರವಿರುವ ಕಟಕ ಚಿಂಚೋಳಿಯಲ್ಲಿ ಖಾಸಗಿ ಶಾಲೆ ಶಿಕ್ಷಕರಾಗಿದ್ದರು. ಆದರ್ಶ ಶಿಕ್ಷಕರಾದ ಇವರು ಮಕ್ಕಳಿಗಷ್ಟೆ ಬೋಧನೆ ಮಾಡದೆ ಉಳಿದ ಸಮಯದಲ್ಲಿ ಜನರಿಗೆ ಧರ್ಮ ತತ್ವಗಳನ್ನು ತಿಳಿಸುತ್ತಿದ್ದದನ್ನ ಲೇಖಕರು ಈ ಚರಿತ್ರೆಯಲ್ಲಿ ಚರ್ಚಿಸಿದ್ದಾರೆ.

ಜಡ ಮತಿಯಾದ ಬಾಲಕನಿಗೆ ಬೋಧಿಸುವಾಗ ಶಿಕ್ಷೆ ಕೊಟ್ಟ ಕಾರಣವೇ ಬಾಲಕನ ತಾಯಿ ನುಡಿದ ಬಿರು ಮಾತುಗಳು ''ಜಂಗಮನಾದ ನೀನು ಮಕ್ಕಳಿಗೆ ಪಾಠ ಕಲಿಸುವುದಕ್ಕಿಂತ ಜೋಳಿಗೆ ಹಾಕಿ ದೇಶಾಂತರಕ್ಕೆ ಹೋಗು'' ೧ ಎಂಬ ಒಂದು ಮಾತು ವೈರಾಗ್ಯದ ಕಡೆಗೆ ಹೋಗುವಂತೆ ಮಾಡಿತು. ಉಟ್ಟ ಬಟ್ಟೆಯ ಮೇಲೆ ಬರೆಗಾಲಿನಿಂದಲೆ, ಹಿಂಡ ನಗಲಿದ ಗಜದಂತೆ, ಯಾರಿಗೂ ಹೇಳದೆ ಊರುಬಿಟ್ಟು ಹೋದರೆಂದು ಬರೆದಿದ್ದಾರೆ. ಈ ಘಟನೆಯು ಬುದ್ದನ ಪ್ರಸಂಗಕ್ಕೆ ಹೋಲುತ್ತದೆ.

ಹನ್ನೆರಡು ವರ್ಷಗಳ ಕಾಲ ದೇಶದ ಪೂಣ್ಯಕ್ಷೇತ್ರಗಳನ್ನೆಲ್ಲ ಸಂಚಾರ ಮಾಡಿದ್ದರು. ಆಯಾ ಸ್ಥಳಗಳಲ್ಲಿ ಕಠೋರ ಅನುಷ್ಠಾನ ಮಾಡಿದ್ದರು. ಅವರ ಈ ಸಾಧನೆಯಿಂದ ಸಿದ್ಧಿ ಉಂಟಾಯಿತು. ಯಾರು ಏನೇ ಬೇಡಲಿ ಅವರಿಗೆ ಕೂಡುವ ಸಾಮರ್ಥ್ಯ ಬಂದಿತ್ತು. ವಾಕಸಿದ್ಧಿಯೂ ಪಡೆದಿದ್ದರು. ಸಿದ್ಧಿ ಪಡೆದ ನಂತರ ಮನೆಗೆ ಮರಳಿ ಗ್ರಹಸ್ಥಾಶ್ರಮ ಸ್ವಿಕರಿಸಿದ್ದನ್ನು ಸರಳವಾದ ಭಾಷೆಯಲ್ಲಿ ಎಲ್ಲರಿಗೆ ತಿಳಿಯುವಂತೆ ಚಿತ್ರಿಸಿದ್ದಾರೆ.

ಲೋಕೋದ್ಧಾರ ಕಾರ್ಯ ಕೈಕೊಂಡರು ವಿಧವೆಯಾದ ಬ್ರಾಹ್ಮಣರ ಮಹಿಳೆಯೊಬ್ಬಳು ಒಂದು ಗಂಡು ಕೂಸಿಗೆ ಜನ್ಮವೆತ್ತಳು. ಅವಳಿಗೆ ಬ್ರಾಹ್ಮಣರು ಬಹಿಷ್ಕರಿಸಿದಾಗ ರೇವಪಯ್ಯನವರ ಹತ್ತಿರ ಧಾವಿಸಿ ಬಂದಳು. ರೇವಪಯ್ಯನವರು ಅವಳಿಗೆ ಆಶ್ರಯವಿತ್ತು ತಾಯಿ ಮಗುವಿಗೆ ಲಿಂಗದೀಕ್ಷೆಯಿತ್ತಿತರು.

---

೧) ವಿಶ್ವ ಪುತ್ಥಳಿ ರೇವಪ್ಪಯ್ಯನವರು. ಪುಟ-೧೧

ಬಾಲಕನಿಗೆ ವೀರಬಸವಂತರಾಯ ಎಂದು ನಾಮಕರಣ ಮಾಡಿದರು.ಶರಣಬಸವೇಶ್ವರರು ಕಡೋಳ ಮಡಿವಾಳಪ್ಪನಿಗೆ ಜನ ಬಹಿಷ್ಕರಿಸಿದಾಗ ಅವರಿಗೆ ಉದ್ಧರಿಸಿದಂತೆ ನಾವದಗಿ ರೇವಪಯ್ಯನವರು ಅದೇ ಕಾರ್ಯವನ್ನ ಮುಂದುವರೆಸಿದರೆಂದು ಲೇಖಕರು ತಿಳಿಸುತ್ತಾರೆ.

ಇವರು ಎಲ್ಲ ಜಾತಿಯವರಿಗೂ ಲಿಂಗ ದೀಕ್ಷೆಯನ್ನಿತ್ತು ಉದ್ಧರಿಸಿದರೆಂದು ಕೃತಿಯಲ್ಲಿ ಬಂದಿದೆ. ಅವರಲ್ಲಿ ಹರಿಜನರು, ಮುಸ್ಲಿಂರು, ಮುಂತಾದವರು ಇವರ ಶಿಷ್ಯ ಬಳಗದಲ್ಲಿದ್ದರು. ಇವರ ಶಿಷ್ಯರಲ್ಲಿ ಮುಖ್ಯರೆಂದರೆ ಹಳೆಂಬರ ವೀರಭದ್ರಪ್ಪನವರು, ಸಿದ್ಧಪ್ರಭುಗಳು, ಖೇಣಿ ಮಡಿವಾಳಪ್ಪನವರು ಉದಗೀರನ ಸಂಗ್ರಾಮಪ್ಪನವರು, ಮಹ್ಮದಿಯ ಚಾಂದಕವಠೆ, ಕುರುಬರಾದ ಬೀರಪ್ಪ, ಅಮ್ಮಣಿ ಫತೇಪುರ ಶರಣಪ್ಪ, ಡಾ. ಜಯದೇವಿ ತಾಯಿ ಲಿಗಾಡೆ, ಬಾಬಾ ಸಾಹೇಬ ವಾರದ, ಮುಂತಾದವರ ಹೆಸರುಗಳನ್ನು ಲೇಖಕರು ಸ್ಮರಿಸಿದ್ದಾರೆ.

ಲಿಂಗ ದೀಕ್ಷೆ ತೆಗೆದುಕೊಂಡವರಲ್ಲಿ ಉಂಬಲ್ಲಿ ಉಡುವಲ್ಲಿ ಭೇಧ ಮಾಡಬಾರದು ಎಂಬ ತತ್ವ ಕೇದಾರ ಪೀಠದವರಿಗೆ ಸರಿ ಬರಲಿಲ್ಲ. ಅದರಿಂದ ಇವರಿಗೆ ಬಹಿಷ್ಕರಿಸಿದರು. ರೇವಪಯ್ಯನವರು ನೀಲಕಂಠಯ್ಯನೆಂಬ ಶಿಷ್ಯನಿಗೆ ಕಾಶಿಕಟ್ಟಿ ಗಂಡುಗತ್ತಿ ಧರಿಸಿ ಊರಲ್ಲಿ ಪ್ರದಕ್ಷಿಣೆ ಹಾಕಲು ಹೇಳಿದರು. ಹೋಗುವಾಗ 'ಉಂಬಲ್ಲಿ ಉಡುವಲ್ಲಿ ಕೊಂಬಲ್ಲಿ ಕೊಡುವಲ್ಲಿ' ಎಂದು ಘೋಷಣೆ ಮಾಡುತ್ತಾ ಹೋಗು ಯಾರಾದರು ತಡೆದರೆ ನಿನ್ನ ಕೈಯಲ್ಲಿದ ಗಂಡುಗತ್ತಿಯಿಂದ ತಲೆಯನ್ನು ಕತ್ತರಿಸಿಕೊ ಎಂದು ಅಪ್ಪಣೆ ಇತ್ತರು. ಭಾಲ್ಕಿ ಗ್ರಾಮದವರೆಲ್ಲ ಭಯಭೀತರಾಗಿ ಮನೆಬಾಗಿಲು ಮುಚ್ಚಿಕೊಂಡರು. ಯಾರು ತಡೆಯಲಿಲ್ಲ. ಈ ರೀತಿ ನಾವದಗಿ ರೇವಪಯ್ಯನವರು ಜನರಲ್ಲಿ ಸ್ವಾರ್ಥ ಬಿತ್ತಿದ ಮೂಢ ನಂಬಿಕೆಯನ್ನು ಕಿತ್ತೆಸೆದರೆಂದು ಲೇಖಕರು ಹೃದಯಂಗಮವಾಗಿ ವರ್ಣಿಸಿದ್ದಾರೆ.

ನೀಲಗಾರ ಚಿಂತಪ್ಪನು ದುಬುಲಗುಂಡಿಯ ಪತ್ತೇಪುರಿ ಶರಣಪ್ಪನವರ ಸಾಲಗಾರನಾಗಿದ್ದಾಗ ಸಾಲ ಬೇಗ ಕೊಡದ ಕಾರಣ ಚಿಂತಪ್ಪನ ತಲೆಯ ಮೇಲೆ ಕಲ್ಲು ಹೊದಿಸಿ ಬಿಸಿಲಿನಲ್ಲಿ ನಿಲ್ಲಿಸಿದನು. ಕರುಣಾ ಮೂರ್ತಿಗಳಾದ ನಾವದಗಿ ಶರಣರು ತಾವೇ ಚಿಂತಪ್ಪನ ಮೇಲಿದ್ದ ಕಲ್ಲನ್ನು ಹೊತ್ತುಕೊಂಡು ನಿಂತರು. ಇದನ್ನು ಗಮನಿಸಿದ ಸಾಹುಕಾರನ ಹೃದಯ ಪರಿವರ್ತನೆಯ ಸಂದರ್ಭವನ್ನು ಲೇಖಕರು ಹೃದಯ ಕರಗುವಂತೆ ಹೇಳಿದ್ದಾರೆ.

'ಸತ್ಯ ನುಡಿಯುವುದೆ ಸ್ವರ್ಗಲೋಕ' ಎಂಬ ಮಾತನ್ನ ಬಸವಣ್ಣನವರು ಹೇಳಿದ್ದು ನಾವದಗಿ ರೇವಪಯ್ಯನವರು ಪಾಲಿಸಿದ ಪ್ರಸಂಗ ಹೀಗಿದೆ. ನಾವದಗಿ ರೇವಪಯ್ಯನವರ ಮಗ ಆವೇಷಭರಿತನಾಗಿ ಒಬ್ಬ ವ್ಯಕ್ತಿಯ ಕೊಲೆ ಮಾಡಿದನ್ನು ನ್ಯಾಯಾಲಯದಲ್ಲಿ ಸುಳ್ಳು ಹೇಳಿದರೆ ಮಗನಿಗೆ ಶಿಕ್ಷೆಯಾಗುತ್ತಿರಲಿಲ್ಲ ಜನರು ಎಷ್ಟು ಒತ್ತಾಯ ಮಾಡಿದರು. ಅವರು ನ್ಯಾಯಾಲಯದಲ್ಲಿ ನಿಜವನ್ನೆ ಹೇಳಿದರು. ಈ ಘಟನೆಯಿಂದ ರೇವಪಯ್ಯನವರು ಎಷ್ಟು ಸತ್ಯ ಶುದ್ಧರಾಗಿದ್ದರೆಂಬುದನ್ನ ತಿಳಿದು ಬರುತ್ತದೆ.

ಕ್ಷಮಾಶೀಲರಾದ ನಾವದಗಿ ರೇವಪಯ್ಯನವರ ಅನೇಕ ಸಂದರ್ಭಗಳಲ್ಲಿ ತಮ್ಮನ್ನ ಕಷ್ಟ ಕೊಟ್ಟವರಿಗೂ ಕ್ಷಮಿಸಿದ ಅನೇಕ ಘಟನೆಗಳನ್ನು ಪಂಚಾಕ್ಷರಿಯವರು ಬರೆದಿದ್ದಾರೆ.

ನಾವದಗಿ ರೇವಪಯ್ಯನವರು ಸರಳತೆಯ ಸಾಕಾರಮೂರ್ತಿ ಗಳಾಗಿದ್ದರು. ಕಂಬಳಿಯೇ ಅವರ

ಹಾಸಿಕೆ ಹೊದಿಕೆಯಾಗಿತ್ತು. ಎಂತಹ ಬಿಸಿಲು ಕಾಲದಲ್ಲಿ ಪಾದರಕ್ಷೆ ಹಾಕುತ್ತಿರಲಿಲ್ಲ. ಮೈಮೇಲೆ ತೊಟ್ಟ ಬಟ್ಟೆಗಳನ್ನ ವಸ್ತ್ರವಿಹಿನರಿಗೆ ಕೊಟ್ಟು ತಾವು ಆಜೀವ ಪರ್ಯಂತ ಒಂದು ತುಂಡು ಪಂಚೆ ಮಾತ್ರ ಧರಿಸಿ ಬರಿ ಮೈಯಿಂದ ತಮ್ಮ ಆಯುಷ್ಯವನ್ನೆಲ್ಲ ಕಳೆದ ವ್ರತಸ್ಥರು. ಇದು ಗಾಂಧೀಜಿಯವರ ಜೀವನಕ್ಕೆ ಹೋಲುತ್ತದೆ. ಇವರ ಲಿಂಗೈಕ್ಯವು ೨೧-೧೨-೧೯೩೬ ರಲ್ಲಿ ಆಯಿತು.

೧೦೫ ವರ್ಷಗಳ ಕಾಲ ಇವರು ಪರೋಪಕಾರ ಜೀವನ ಸಾಗಿಸಿದವರಾಗಿದ್ದರು. ಇವರ ಜೀವನದ ಎಲ್ಲ ಘಟನೆಗಳನ್ನು ಎಳೆ ಎಳೆಯಾಗಿ ವಿವರಿಸಿದ್ದಾರೆ.

**ಸಜ್ಜನರ ಸಂಗದಲ್ಲಿ : ( ವ್ಯಕ್ತಿ ಚಿತ್ರಗಳು)**

ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು 1985 ರಲ್ಲಿ ಪ್ರಕಟಿಸಿದ ಕೃತಿಯೇ ಸಜ್ಜನರ ಸಂಗದಲ್ಲಿ. ಈ ಕೃತಿಯಲ್ಲಿ ಒಟ್ಟು ಹದಿನಾಲ್ಕು ವ್ಯಕ್ತಿಗಳ ವ್ಯಕ್ತಿ ಚಿತ್ರಣವನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಇದರಲ್ಲಿ ಸಮಕಾಲೀನರು ಇದ್ದಾರೆ. ಸ್ವಲ್ಪ ಹಿಂದಿನ ತಲೆಮಾರಿನವರು ಇದ್ದಾರೆ. ಅವರೆಂದರೆ ಬಕ್ಕಪ್ರಭುಗಳು. ಈ ಪುಸ್ತಕವು ಓದುತ್ತಾ ಹೋದಂತೆ ಮನಸ್ಸನ್ನು ಲೋಹಚುಂಬಕದಂತೆ ತನ್ನತ್ತ ಸೆಳೆಯುತ್ತಾ ಹೋಗುತ್ತದೆ. ಈ ಕೃತಿಯು ಓದುಗರಿಗೆ ಹೊಸ ಅನುಭವವನ್ನು ನೀಡುತ್ತದೆ. ಬೀದರ ನಾಡಿನ ಪ್ರಮುಖ ವ್ಯಕ್ತಿಗಳ ಪರಿಚಯದೊಂದಿಗೆ ಬೀದರ ಜಿಲ್ಲೆಯ ಸಾಮಾಜಿಕ ಚಿತ್ರಣವು ಇದರಲ್ಲಿ ಅಡಗಿದೆ. ಒಂದು ದೇಶದ ಚರಿತ್ರೆಯು ಮಹಾಪುರುಷರ ಜೀವನದಲ್ಲಿ ಅಡಗಿರುತ್ತದೆ ಎಂಬ ಮಾತು ಈ ಪುಸ್ತಕ ಓದುವುದರಿಂದ ಮನಗಾಣಬಹುದಾಗಿದೆ.

ಶ್ರೀ ಪಂಚಾಕ್ಷರಿಯವರು ತಮ್ಮ ಈ ಕೃತಿಯಲ್ಲಿ ಪ್ರತಿಯೊಬ್ಬ ವ್ಯಕ್ತಿಗೆ ಸಂಬಂಧಿಸಿದಂತಹ ಒಂದು ವಚನದ ಮೂಲಕ ಅವರ ವ್ಯಕ್ತಿ ಚಿತ್ರಣವನ್ನ ಪ್ರಾರಂಭಿಸಿದ್ದು ಓದುಗರಲ್ಲಿ ವ್ಯಕ್ತಿಯ ಬಗ್ಗೆ ಸರಿಯಾದ ಭೂಮಿಕೆ ಹುಟ್ಟುತ್ತದೆ. ಆ ವ್ಯಕ್ತಿಗಳ ಬಗ್ಗೆ ಕೊಟ್ಟ ಶೀರ್ಷಿಕೆಗಳು ಆ ವ್ಯಕ್ತಿಯ ವ್ಯಕ್ತಿತ್ವವನ್ನು ಎತ್ತಿ ಹಿಡಿಯುತ್ತವೆ. ವೈವಿಧ್ಯತೆಯಿಂದ ಕೂಡಿದ ಈ ಕೃತಿಯು ಏಕತಾನತೆಗೆ ಒಳಗಾಗಿಲ್ಲ. ಇದರ ಲ್ಲಿ ಬರುವ ನಾಲ್ಕು ವ್ಯಕ್ತಿಗಳ ಚಿತ್ರಣ ಬೀದರ ನಾಡಿನವರಲ್ಲ. ಅವರಲ್ಲಿ ಜಾನಪದ ಸಾಹಿತಿಗಳಾದ ಸಿಂಪಿ ಲಿಂಗಣ್ಣ, ಗಾನ ಕೋಗಿಲೆ ಶಿವಮೊಗ್ಗ ಸುಬ್ಬಣ್ಣ, ಅರಣ್ಯ ರಕ್ಷಕ ನಿಜಲಿಂಗಪ್ಪ ಮತ್ತು ಧರ್ಮಕ್ರಾಂತಿ ದಿವ್ಯ ಜ್ಯೋತಿ ಮಾತೆ ಮಹಾದೇವಿ. ಉಳಿದವರೆಲ್ಲ ಕಲ್ಯಾಣ ನಾಡಿನವರು. ಇಲ್ಲಿ ಬರುವ ವಿಷಯಕ್ಕೆ ತಕ್ಕಂತೆ ಶೈಲಿಯು ಕಾವ್ಯಮಯವಾಗಿ ಮೂಡಿ ಬಂದಿದೆ. ವ್ಯಕ್ತಿಯ ಶ್ರೇಷ್ಠತೆ ಇರುವುದು ಆ ವ್ಯಕ್ತಿಯ ಹಣ ಬಲದಿಂದಲ್ಲ. ಸಾಮಾಜಿಕ ಸ್ಥಾನಮಾನಗಳಿಂದಲೂ, ಅವರು ಬಾಳಿದ ಆದರ್ಶ ಜೀವನದಿಂದ ಎಂಬ ಮಾತು ಈ ವ್ಯಕ್ತಿ ಚಿತ್ರಣಗಳಿಂದ ತಿಳಿದುಕೊಳ್ಳಬಹುದಾಗಿದೆ.

ಕರ್ಕನಳ್ಳಿ ಗಂಗಾಧರ ಬಕ್ಕಪ್ರಭುಗಳವ್ಯಕ್ತಿಚಿತ್ರವು ಲೇಖಕರು ಅಲ್ಲಮಪ್ರಭುಗಳ ವಚನವೊಂದರಿಂದ ಪ್ರಾರಂಭಿಸಿದ್ದಾರೆ.

'ಕಲ್ಲೊಳಗಣ ಕಿಚ್ಚು ಉರಿಯಬಲ್ಲುದೆ? ..........

........................' ಎಂದರೆ ಕಲ್ಲಿನಲ್ಲಿ ಕಿಚ್ಚು ಅಡಗಿರುವಂತೆ

ಪ್ರತಿಯೊಬ್ಬ ವ್ಯಕ್ತಿಯಲ್ಲಿ ಪರಮಾತ್ಮನು ಅಡಗಿರುತ್ತಾನೆ. ಅನುಭವಿಯಾದವರಿಗೆ ಅದು ತಿಳಿದಿರುತ್ತದೆ. ಪರಮಾತ್ಮನು ಅವರಿಗೆ ಕಾಣುತ್ತಾನೆ. ಇಂತಹ ಅನುಭವಿಗಳಲ್ಲಿ ಬಕ್ಕಪ್ರಭುಗಳು ಒಬ್ಬರಾಗಿದ್ದರು. ಬಕ್ಕಪ್ರಭುಗಳಿಗೆ ಜನ್ಮ ಕೊಟ್ಟ ಊರು. ಆಂಧ್ರಪ್ರದೇಶದ ಸಂಗಾರೆಡ್ಡಿ ಜಿಲ್ಲೆಯ ಆತ್ಮಕೂರು ಎಂಬ ಹಳ್ಳಿ. ಇದು ಸದಾಶಿವಪೇಟದ ಹತ್ತಿರವಿದೆ. ಇವರ ತಾಯಿ ಗೌರಮ್ಮ ತಂದೆ ಭೋಜಪ್ಪಾ. ಈ ದಂಪತಿಗಳ ಎರಡನೇ ಮಗನಾಗಿ ಜನಿಸಿದ್ದಾರೆ. ಬಾಲಕನಾಗಿದ್ದಾಗ ಇವರಿಗೆ ಗಂಗಾಧರ ಸ್ವಾಮಿಗಳು ದಿಕ್ಷಾ ಗುರುಗಳಾಗಿದ್ದರು. ಆ ಕಾರಣದಿಂದಲೆ ಇವರು ಯಾವಾಗಲು ಸನ್ಯಾಸಿಗಳ ಸತ್ಪುರುಷರ ಸಂಗದಲ್ಲಿ ಜನಿಸಿದ ಇವರು ತ್ರಿಕಾಲ ಇಷ್ಟಲಿಂಗ ಪೂಜಾನುಷ್ಠಾನದಲ್ಲಿ ತಲ್ಲೀನರಾಗಿರುತ್ತಿದ್ದರು. ತಪಸ್ಸು ಗೈಯ್ಯಲು ನಿರ್ಜನ ಪ್ರದೇಶವಾದ ಗೊಟಂಗೊಟ್ಟಿ ಅರಣ್ಯದಲ್ಲಿ ಕೆಲವು ಕಾಲ ವಾಸ ಮಾಡಿದ್ದರು ಎಂದು ತಿಳಿದು ಬರುತ್ತದೆ. ಯೌವನಾವಸ್ಥೆಗೆ ಬಂದಾಗ ಇವರ ವಿವಾಹವು ಮಾಮೂಲ ಪೇಟ ಗ್ರಾಮದ ಮಡಿವಾಳಪ್ಪ ನವರ ಮಗಳೊಂದಿಗೆ ನೆರವೇರಿತು. ಅವರ ಹೆಸರು ಗಿರಿಜಾಬಾಯಿ ಎಂಬುದಾಗಿತ್ತು. ಸಂಸಾರಿಗಳಾದ ಇವರು ಸತ್ಯ ಶುದ್ಧಿ ಕಾಯಕ ಮಾಡುತಿದ್ದುದು ಇವರ ಈ ವ್ಯಕ್ತಿ ಚಿತ್ರದಲ್ಲಿ ಮೂಡಿಬಂದಿದೆ. ಇವರು ಆತ್ಮಕೂರು ಬಿಟ್ಟು ಕಕನಳ್ಳಿಗೆ ಬಂದದ್ದು ರೋಚಕ ಘಟನೆಯಾಗಿದೆ. ಇವರು ಕಲ್ಬುರ್ಗಿಯ ಶರಣ ಬಸವೇಶ್ವರ ಸಮಕಾಲೀನರಾಗಿದ್ದದು . ಇವರು ೧೭೩೫ ರಲ್ಲಿ ಸಜೀವ ಸಮಾಧಿ ತೆಗೆದುಕೊಂಡದ್ದು ಅಲ್ಲದೆ ಅನೇಕ ವಿಷಯಗಳನ್ನು ಲೇಖಕರು ಕಣ್ಣ ಮುಂದೆಕಟ್ಟುವಂತೆ ಬಣ್ಣಿಸಿದ್ದಾರೆ.

ಭಾಲ್ಕಿಯ ಪರಮ ಪೂಜ್ಯ ಚನ್ನಬಸವ ಪಟ್ಟದೇವರ ವ್ಯಕ್ತಿ ಚಿತ್ರ ಮಾಡಿಕೊಡುವಾಗ ಲೇಖಕರು ಬಸವಣ್ಣನವರ ವಚನವೊಂದರಿಂದ ಅವರ ಸಮಗ್ರ ಜೀವನದ ಉದ್ದೇಶವನ್ನ ಹಿಡಿದಿಟ್ಟಿದ್ದಾರೆ.

"ಬ್ರಹ್ಮ ಪದವಿಯನೊಲ್ಲೆ ವಿಷ್ಣು ಪದವಿಯನೊಲ್ಲೆ
....................................ನಿಮ್ಮ ಸದ್ಭಕ್ತರ
ಪಾದವನರಿದಿಪ್ಪ ಮಹಾಪಾದವನೆ ಕರುಣಿಸಯ್ಯಾ."

ಯಾವ ಪದವಿ ಬಿರುದುಗಳಿಗೂ ಬೆಲೆಕೊಡದ ಪೂಜ್ಯ ಶ್ರೀಗಳು ಬೀದರ ಜಿಲ್ಲೆಯ ಕಮಲನಗರದಲ್ಲಿ ೨೨-೧೨-೧೯೪೦ರಲ್ಲಿ ಜನಿಸಿದ್ದರು. ಇವರು ಐದು ವರ್ಷದವರಿರುವಾಗಲೆ ತಂದೆ-ತಾಯಿಯನ್ನು ಕಳೆದುಕೊಂಡು ತಬ್ಬಲಿಯಾದದ್ದು ಮತ್ತು ಇವರ ಬಾಲ್ಯ ಚಿತ್ರಣವನ್ನು ಕರುಣಾಜನಕವಾಗಿ ಲೇಖಕರು ಚಿತ್ರಿಸಿದ್ದಾರೆ. ಮುಧೋಳ ಶಿವಲಿಂಗೇಶ್ವರರು ಇವರನ್ನು ಕಂಡು ಈ ಬಾಲಕ ಮುಂದೆ ದೊಡ್ಡ ಸನ್ಯಾಸಿಯಾಗುವನೆಂದು ಬಗೆದು ತಮ್ಮ ಹತ್ತಿರ ಇಟ್ಟುಕೊಂಡು ಬೆಳೆಸಿದರು. ಮುಂದೆ ಇವರಿಗೆ ಭಾಲ್ಕಿಯ ಹಿರೇಮಠದಲ್ಲಿ ಪೀಠಾರೋಹಣವಾಯಿತು. ಶೈಕ್ಷಣಿಕ ಸೇವೆ, ಧಾರ್ಮಿಕ ಸೇವೆ, ಆಧುನಿಕ ಅನುಭವ ಮಂಟಪ ಸ್ಥಾಪಿಸಿದ್ದು ಮುಂತಾದ ವಿಷಯಗಳನ್ನು ವಿವರವಾಗಿ ಈ ವ್ಯಕ್ತಿ ಚಿತ್ರದಲ್ಲಿ ಲೇಖಕರು ಶ್ರೀಗಳವರ ಅದ್ಭುತವಾದ ದಿವ್ಯ ವ್ಯಕ್ತಿತ್ವದ ಚಿತ್ರಣವನ್ನ ಮಾಡಿಕೊಟ್ಟಿದ್ದಾರೆ.

ಮಾತೆ ಮಹಾದೇವಿಯವರ ಪರಿಚಯವನ್ನು ದೇವರ ದಾಸಿಮಯ್ಯನ -

"ಮೊಲೆ ಮೂಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು ......."

ಎಂಬ ವಚನದಿಂದ ಪ್ರಾರಂಭಿಸಿದ್ದಾರೆ. ಇದರ ಅರ್ಥವೇನೆಂದರ ಗಂಡು ಹೆಣ್ಣಿಗೂ ಅಂಗಾಂಗ ರಚನೆಯಲ್ಲಿ ಭೇಧಭಾವವಿರಬಹುದು. ಆದರೆ ಆತ್ಮವು ಒಂದೆಯಾಗಿರುತ್ತದೆ ಎಂದು ಅರ್ಥಕೊಡುತ್ತದೆ. ಧಾರ್ಮಿಕ ಕ್ಷೇತ್ರದಲ್ಲಿ ವೀರಶೈವ ಧರ್ಮವನ್ನು ಬಿಟ್ಟ ಬೇರೆ ಧರ್ಮದಲ್ಲಿ ಸ್ತ್ರೀಯರಿಗೆ ಸ್ವಾತಂತ್ಯ ದೊರಕಿಲ್ಲ ಎಂದು ಲೇಖಕರು ಹೇಳುತ್ತಾರೆ. ಆದರೆ ಲಿಂಗವಂತ ಧರ್ಮದಲ್ಲಿ ಮಾತ್ರ ಮಹಿಳೆಗೆ ಪುರುಷನಷ್ಟೆ ಸ್ಥಾನಮಾನಗಳು ಕೊಟ್ಟುದಲ್ಲದೆ ಮಠದ ಪೀಠಾಧಿಪತಿಯಾಗಿ ಮಾಡಿದ್ದು ಈ ಪುಸ್ತಕದಲ್ಲಿ ಮೂಡಿ ಬಂದಿದೆ. ಲಿಂಗಾನಂದ ಗುರುಗಳಿಂದ ದೀಕ್ಷೆ ಪಡೆದ ವಿಷಯ, ಇವರ ಸಾಹಿತ್ಯಸಿದ್ಧಿ, ಪ್ರವಚನ ಕಲೆ ಮತ್ತು ಸಾಧನೆಗಳು ಮುಂತಾದವುಗಳನ್ನು ಲೇಖಕರು ವಿವರಣಾತ್ಮಕವಾಗಿ ಹೇಳಿದ್ದಾರೆ. ಪ್ರಸಿದ್ಧ ಸಾಹಿತಿಗಳಾದ ಎಸ್.ಆರ್.ಗುಂಜಾಳರು ಇವರ ಬಗ್ಗೆ ಹೇಳಿದ ಮಾತು "ಶ್ರೀ ಬಸವಣ್ಣನವರ ಅನುಯಾಯಿಗಳೆಂದು ಹೇಳಿಕೊಳ್ಳುವ ಅನೇಕ ಪುರುಷ ಪೀಠಾಧಿಕಾರಿಗಳು ಮಾಡದೆ ಇರುವ ಅನೇಕ ಕಾರ್ಯವನ್ನು ಮಹಿಳಾ ಪೀಠಾಧಿಪತಿಗಳಾದ ಪೂಜ್ಯ ಮಾತೆ ಮಹಾದೇವಿಯವರು ಮಾಡಿ ತೋರಿಸುತ್ತಿರುವುದು ಸ್ತುತ್ಯಾರ್ಹವಾಗಿದೆ"[೧] ಎಂಬ ಮಾತ್ನು ಉಲ್ಲೇಖಿಸಿದ್ದಾರೆ.

ಬಸವತತ್ವದ ಪ್ರತಿಪಾದಕರಾದ ಬೆಲ್ದಾಳ ಸಿದ್ಧರಾಮ ಶರಣರ ಹಿರಿಮೆಯನ್ನು ಈ ಕೃತಿಯಲ್ಲಿ ಬಂದಿದೆ. ಇವರು ಜನಿಸಿದ್ದು ೧೯೪೪ ರಲ್ಲಿ ತಂದೆ ಲಾಲಪ್ಪಾ ತಾಯಿ ಲಕ್ಷ್ಮಿ, ಅಸ್ಪೃಶ್ಯತೆಯ ಕಳಂಕ ಇವರ ಜನ್ಮದಿಂದಲೆ ಅಂಟಿಕೊಂಡು ಬಂದದ್ದು, ಬಾಲ್ಯದಿಂದಲೆ ಅಧ್ಯಾತ್ಮಿಕ ಗುಣವುಳ್ಳವರಾಗಿದ್ದುದು, ಧ್ಯಾನ-ತಪಸ್ಸಿನಲ್ಲಿ ದಿನಗಟ್ಟಲೆ ಕಳೆಯುತ್ತಿದ್ದರು. ಇಂತಹ ಶರಣರನ್ನು ಮೊದಲು ಗುರುತಿಸಿದವರೆಂದರೆ ಭಾಲ್ಕಿಯ ಚನ್ನಬಸವ ಪಟ್ಟದ್ದೇವರು. ಅಲ್ಲದೆ ಇವರನ್ನ ಸಿದ್ಧರಾಮ ಶರಣರೆಂದು ನಾಮಕರಣ ಮಾಡಿದ್ದರು. ಕರ್ನಾಟಕದಾದ್ಯಂತ ಶರಣರ ಹೆಸರು ಮನೆಮಾತಾಗಿದ್ದುದು, ಮುಂತಾದ ಅವರ ಜೀವನದ ಘಟನೆಗಳ ಮೂಲಕ ಲೇಖಕರು ಶರಣರನ್ನ ಹೊಗಳಿದ್ದಾರೆ. ಇವರನ್ನ ಕುರಿತು ನಾಡಿನ ಖ್ಯಾತ ಪತ್ರಿಕೋದ್ಯಮಿಯಾದ ಪಾಟೀಲ ಪುಟ್ಟಪ್ಪನವರು ಹೀಗೆ ಹೇಳುತ್ತಾರೆ "ನಾನು ಅನೇಕ ಸ್ವಾಮಿಗಳ, ಜಗದ್ಗುರುಗಳ, ಪಂಡಿತರ ಭಾಷಣಗಳನ್ನ ಕೇಳಿದ್ದೇನೆ. ಆದರೆ ಬೆಲ್ದಾಳ ಶರಣರಂತೆ ವೀರಶೈವ ಧರ್ಮದ ಬಗ್ಗೆ ಪ್ರವಚನ ಮಾಡುವವರನ್ನು ಇಲ್ಲಿಯವರೆಗೆ ಕಂಡಿಲ್ಲ"[೨] ಎಂದು ಹೇಳುವುದರಿಂದ ಅವರ ವ್ಯಕ್ತಿತ್ವದ ಪರಿಚಯ ಮಾಡಿಕೊಟ್ಟಿದ್ದಾರೆ.

ಬೇಮಳಖೇಡದ ಪರಮ ಪೂಜ್ಯ ಶ್ರೀ.ಶಿ.ಜಿ.ಸ್ವಾಮಿಗಳ ವ್ಯಕ್ತಿ ಚಿತ್ರಣ ಸ್ವಾರಸ್ಯಕರವಾಗಿ ಚಿತ್ರಿಸಿದ್ದಾರೆ. ಹರಿಜನ ಪಂಗಡದ ಉರಿಲಿಂಗ ಪೆದ್ದಿ ಮಠದ ಪೀಠಾಧಿಪತಿಗಳಾಗಿ ಅವರು ದೀರ್ಘಕಾಲ ಹರಿಜನರ ಸುಧಾರಣೆ ಗೈದದ್ದು ಪುಣ್ಯಶೆಟ್ಟಿಯವರು ಸವಿಸ್ತಾರವಾಗಿ ಚಿತ್ರಿಸಿದ್ದಾರೆ. ಇವರು ಕಲ್ಬುರ್ಗಿ ಜಿಲ್ಲೆಯ ಸೇಡಂ ತಾಲೂಕಿನ ದೇವನೂರು ಗ್ರಾಮದಲ್ಲಿ ೧೯೨೨ ರಲ್ಲಿ ಜನಿಸಿದ್ದು ಹಾಗೂ ಶಿವಯೋಗಿ

---

೧) ಸಜ್ಜನರ ಸಂಗದಲ್ಲಿ ಪುಟ-೨೦-೨೧

೨) ಸಜ್ಜನರ ಸಂಗದಲ್ಲಿ ಪುಟ-೨೫

ಸ್ವಾಮಿಗಳಾಗಿ ಸಂಸ್ಕಾರ ಪಡೆದದ್ದು ಚಿತ್ರಿಸಿದ್ದಾರೆ. ಅವರು ಬೇಮಳಖೇಡದ ಮಠಕ್ಕೆ ಪೀಠಾಧಿಕಾರಿಯಾಗಿ ಬಂದು ಕನ್ನಡದ ರಾತ್ರಿ ಶಾಲೆ ತೆರೆದದ್ದು ಇದರಿಂದ ಅಲ್ಲಿನ ಜನರು ಸರಕಾರಿ ಸೇವೆಯಲ್ಲಿ ಸೇರಿದ್ದು, ಅಲ್ಲದೆ ಸ್ವಾಮಿಗಳು ಜನರಿಗೆ ಮದ್ಯ-ಮಾಂಸಗಳಿಂದ ದೂರವಿರಿಸಿದ್ದು, ಪ್ರಾಣಬಲಿಯನ್ನು ಹೋಗಲಾಡಿಸಿದ್ದು ಅಲ್ಲದೆ ಇವರ ಸ್ವಚ್ಛತೆ, ಸಭ್ಯತೆಯನ್ನು ಕಂಡು ಗ್ರಾಮದ ಶರಣರು ಅಸ್ಪೃಶ್ಯತೆಯನ್ನು ಆಚರಿಸದೆ ಇರುವುದು, ಮುಂತಾದ ಘಟನೆಗಳನ್ನು ವಿವರಣಾತ್ಮಕವಾಗಿ ಓದುಗರಿಗೆ ಪರಿವರ್ತನೆಯನ್ನುಂಟು ಮಾಡುವಂತೆ ಚಿತ್ರಿಸಿದ್ದಾರೆ.

ಕನ್ನಡ ಜಾನಪದ ಸಾಹಿತಿ ಸಿಂಪಿ ಲಿಂಗಣ್ಣ ನಾಡಿನ ಹೆಮ್ಮೆಯ ಕವಿಗಳು, ಪ್ರಬಂಧಕಕಾರರು, ಜಾನಪದ ಸಾಹಿತಿಗಳು, ತತ್ವಜ್ಞಾನಿಗಳು, ಉತ್ತಮವಾಗ್ಮಿಗಳು. ಹಾಗೂ ರಸಿಕ ಚಕ್ರಿಯಾದ ಸಿಂಪಿ ಲಿಂಗಣ್ಣನವರ ವ್ಯಕ್ತಿತ್ವವನ್ನ ಕೆಲವೇ ಮಾತುಗಳಲ್ಲಿ ಲೇಖಕರು ಬಣ್ಣಿಸಿದ್ದಾರೆ. ಸಿಂಪಿ ಲಿಂಗಣ್ಣನವರು ವಿಶ್ವವಿದ್ಯಾಲಯದ ಕಟ್ಟೆಯನ್ನು ಏರದಿದ್ದರೂ ಪದವಿ ಪಡೆದ ಪದವಿಧರರಿಗಿಂತಲು ಕಡಿಮೇ ಏನಲ್ಲ ಎಂದು ತಿಳಿಸಿದ್ದಾರೆ. ಇವರು ೧೯೦೫ ಫೆಬ್ರುವರಿ ೧೧ ರಂದು ವಿಜಾಪುರದ ಚಡಚಣದಲ್ಲಿ ಜನಿಸಿದ್ದು, ಅಣ್ಣ ವೀರಣ್ಣ ನವರೇ ಪೋಷಿಸಿದ್ದು, ಬಡತನದಲ್ಲಿ ಅಭ್ಯಾಸಮಾಡಿದ್ದು, ಬಟ್ಟೆ ನೇಯುತ್ತಲೆ ಪುಸ್ತಕಗಳನ್ನು ಓದಿದ್ದು, ತುಂಬಾ ಚೆನ್ನಾಗಿ ವರ್ಣಿಸಿದ್ದಾರೆ. ಮುಂದೆ ಧಾರವಾಡದಲ್ಲಿ ಶಿಕ್ಷಕರ ತರಬೇತಿ ಪಡೆದದ್ದು, ಅಲ್ಲದೆ ಅವರ ಕೌಟುಂಬಿಕ ಹಿನ್ನೆಲೆ, ಶಿಕ್ಷಕರಾಗಿ, ಗ್ರಂಥಕಾರರಾಗಿ, ಭಾಷಣಕಾರರಾಗಿ ಮಾಡಿದ ಸಾಧನೆಗಳನ್ನು ಪುಣ್ಯಶೆಟ್ಟಿಯವರು ತುಂಬಾ ಮಾರ್ಮಿಕವಾಗಿ ಬಣ್ಣಿಸಿದ್ದಾರೆ.

ಗಾನಯೋಗಿ ಶಿವಮೊಗ್ಗ ಸುಬ್ಬಣ್ಣ ನವರ ವ್ಯಕ್ತಿ ಚಿತ್ರ ಪ್ರಾರಂಭ ಮಾಡುವಾಗ ವಚನವೊಂದ ಓದುಗರಿಗೆ ನೆನಪಿಸಿಕೊಟ್ಟಿದ್ದಾರೆ-

ಭಕ್ತ ನೆನಿಸುವೆನಯ್ಯ,
ಯುಕ್ತ ನೆನಿಸುವೆನಯ್ಯಾ

ಮನುಷ್ಯನು ಮನಸ್ಸು ಮಾಡಿದರೆ ಬೇಕಾದ್ದನ್ನು ಸಾಧಿಸಬಹುದು ಎಂಬುದು ಈ ವಚನದ ಸಾರಾಂಶವಾಗಿದೆ. ಬಾಲ್ಯದಿಂದಲೇ ಸಂಗೀತ ಸಾಧನೆಮಾಡಿ ಕರ್ನಾಟಕದಲ್ಲಿಯೇ ಅತ್ಯಂತ ಜನಪ್ರಿಯ ಗಾಯಕರಾದ ಶಿವಮೊಗ್ಗ ಸುಬ್ಬಣ್ಣನವರ ಪರಿಚಯ ಈ ಲೇಖನದಲ್ಲಿದೆ. ಇವರ ಹಾಡನ್ನು ಕೇಳಿದ ಲೇಖಕರು ಅವರನ್ನು ಈ ರೀತಿ ವರ್ಣಿಸುತ್ತಾರೆ. "ಆಕರ್ಷಕ ಮೈಕಟ್ಟಿನ ಹುಣ್ಣಿಮೆಯ ಚಂದ್ರನಂತಿರುವ ಮುದ್ದು ಮುಖದ, ಸಾಮಾನ್ಯ ಎತ್ತರದ, ಸವಿಗೋರಳಿನ ಸುಬ್ಬಣ್ಣನವರು"[೧] ಚಿಟಕಿ ಹಾಕುತ್ತಾ ಕಣ್ಣು ಮುಚ್ಚಿ ತಲ್ಲೀನರಾಗಿ ಹಾಡುತ್ತಿರುವಾಗ ಗಾನಯೋಗಿಗಳಂತೆ ಕಂಗೋಳಿಸುತ್ತಾರೆಂದು ಬಣ್ಣಿಸಿದ್ದಾರೆ. ಶಿವಮೊಗ್ಗ ಜಿಲ್ಲೆ ಇವರಿಗೆ ಜನ್ಮ ಕೊಟ್ಟ ಭೂಮಿ. ತಂದೆ ಗಣೇಶರಾಯರು ತಾಯಿ ರಂಗನಾಯಕಮ್ಮ ಇವರು ವೃತ್ತಿಯಲ್ಲಿ ವಕೀಲರಾಗಿದ್ದು ಪ್ರವೃತ್ತಿಯಲ್ಲಿ ಸಂಗೀತಗಾರರಾಗಿದ್ದು ಅಖಿಲ ಭಾರತ ಮಟ್ಟದ ಸರ್ವಶ್ರೇಷ್ಠ ರಜತ ಕಮಲ ಪ್ರಶಸ್ತಿ ಪಡೆದದ್ದು ಇವರ ಹೆಸರಾಂತ ಹಾಡು ಕಾಡು ಕುದುರೆ ಓಡಿ ಬಂದಿತಾ ಮುಂತಾದ ಅಂಶಗಳನ್ನ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

---

೧) ಸಜ್ಜನರ ಸಂಗದಲ್ಲಿ, ಪುಟ-೪೧

ಬಡವರ ಧನ್ವಂತಿರಿ ಎಂದು ಹೆಸರು ಪಡೆದ ಡಾ॥ ಐ. ಎಸ್.ಕೌಜಲಗಿಯವರು ಬೆಳಗಾಂವ ಜಿಲ್ಲೆಯ ಗೋಕಾಕದಲ್ಲಿ ಐದನೇ ಸೆಪ್ಟೆಂಬರ್ ೧೯೩೧ ಜನಿಸಿದರು. ಗೋಕಾಕ ತಾಲೂಕಿನ ಕೌಜಲಗಿ ಗ್ರಾಮ ಅವರ ಮುತ್ತಾತನ ಗ್ರಾಮವಾಗಿತ್ತು . ಕೌಜಲಗಿಯಿಂದ ಗೋಕಾಕಗೆ ವಲಸೆ ಬಂದುದನ್ನು ಲೇಖಕರು ತಿಳಿಸಿದ್ದಾರೆ ಇವರ ತಂದೆ ಶಿವಯೋಗಪ್ಪ ತಾಯಿ ಕಾಳವ್ವ; ಬೀದರಿಗೆ ಡಾಕ್ಟರ ಆಗಿ ಬಂದದ್ದು, ಸರಕಾರಿ ಹುದ್ದೆ ತ್ಯಜಿಸಿ ಖಾಸಗಿಯಾಗಿ ಆಸ್ಪತ್ರೆ ಪ್ರಾರಂಭಿಸಿದ್ದು ರೋಗಿಗಳ ಸಾಮರ್ಥ್ಯಕ್ಕೆ ತಕ್ಕಷ್ಟು ಹಣ ಪಡೆದು ಚಿಕಿತ್ಸೆ ಕೊಟ್ಟದು. ರಾಜಕೀಯ ಕ್ಷೇತ್ರದಲ್ಲಿ ಹೊಸ ಬದಲಾವಣೆ ತಂದದ್ದು ಮಾದರಿಯ ಶಿಕ್ಷಣ ಸಂಸ್ಥೆ ಸ್ಥಾಪಿಸಿದ್ದು, ಬಸವಮಂಟಪ ಪುನರುದ್ದಾರಗೊಳಿಸಿದ್ದು, ವಾಣಿಜ್ಯ ಕ್ಷೇತ್ರದಲ್ಲಿ ಹೆಸರು ಮಾಡಿದ್ದು, ಮುಂತಾದ ವಿಷಯಗಳನ್ನ ಲೆಖಕರು ಮಾರ್ಮಿಕವಾಗಿ ಹೊಗಳಿದ್ದಾರೆ.

ಕೀರ್ತಿಶೇಷ ಚಂದ್ರಾ ವೀರಶೆಟ್ಟಿ ಅವರ ವ್ಯಕ್ತಿ ಚಿತ್ರ 'ಆಚಾರವೇ ಸ್ವರ್ಗ ಅನಾಚಾರವೇ ನರಕ' ವೆಂಬ ವಚನದಿಂದ ಪ್ರಾರಂಭ ಮಾಡಿದ್ದಾರೆ. ಕಾರಣವೆಂದರೆ ಚಂದಾ ವೀರಶೆಟ್ಟಿಯವರ ನಡೆ ನುಡಿ ಒಂದಾಗಿತ್ತು. ಆಗರ್ಭ ಶ್ರೀಮಂತರಾದರು ತಮ್ಮ ಚಾರಿತ್ರ್ಯವನ್ನು ಕಾಯ್ದುಕೊಂಡು ಬಂದಿದ್ದರು. ಇವರು ದೊಡ್ಡ ಜಮೀನ್ದಾರರಾಗಿದ್ದರು. ದಾನ ಕೊಡುವಲ್ಲಿ ಎತ್ತಿದ ಕೈ ಅನೇಕ ವಿದ್ಯಾರ್ಥಿಗಳು ಇವರ ಮನೆಯಲ್ಲಿ ಉಳಿದು ವಿದ್ಯಾರ್ಜನೆ ಮಾಡಿ ಸರಕಾರಿ ಹುದ್ದೆ ಪಡೆಯುವಲ್ಲಿ ಕೆಲಸ ಮಾಡಿದ್ದು, ಅವರ ತಂದೆ ಕಾಲದಲ್ಲಿ ಸಾಲ ಪಡೆದ ಅನೇಕ ಬಡವರನ್ನು ಸಾಲದಿಂದ ಮುಕ್ತಗೊಳಿಸಿದ್ದನ್ನು ಲೇಖಕರು ಕರುಣಾಜನಕವಾಗಿ ಚಿತ್ರಿಸಿದ್ದಾರೆ. ಸ್ವಾಮಿನಿಷ್ಟ ಸೇವಕನಾದ ನರಸಪ್ಪನ ಸಮಾಧಿಯನ್ನು ಅವರ ತಂದೆಯವರ ಸಮಾಧಿ ಹತ್ತಿರವೇ ಮಾಡಿ ಗೌರವಿಸಿದ್ದು, ಹಣಮಂತನೆಂಬ ಗಮಾಸ್ತನಿಗೆ ವೃದ್ಧಾಪ್ಯ ವೇತನಕೊಟ್ಟು ಪೋಷಿಸಿದ್ದು ಮನೆಯಲ್ಲಿ ಅಡಿಗೆ ಕೆಲಸಕ್ಕಿದ್ದ ಕಲ್ಲವ್ವಳನ್ನು ತಾಯಿಯಂತೆ ಬಗೆದದ್ದು ಮುಂತಾದ ಬಡವರ ಹಾಗು ನಿರ್ಗತಿಕರ ಸೇವೆಯನ್ನು ಮಾಡಿದ ಉದಾಹರಣೆಗಳು ಈ ಲೇಖನದಲ್ಲಿ ಪುಣ್ಯಶೆಟ್ಟಿಯವರು ಬಣ್ಣಿಸಿದ್ದಾರೆ.

ಸಮಾಜ ಸೇವಕರಾದ ಮಹಾದೇವಪ್ಪಾ ಮೀಸೆಯವರು ಎಲೆಯ ಮರೆಯ ಹೂವಿನಂತೆ ಇವರ ಜೀವನವಾಗಿದ್ದುಹಾಗೂ ಇವರ ನ್ಯಾಯ ನಿಷ್ಟುರಗಳಾಗಿ ಧರ್ಮ, ಸಮಾಜ ಸೇವೆ, ಕನ್ನಡ ಸೇವೆ, ಭೂದಾನ ಚಳುವಳಿ ಮುಂತಾದ ವಿಷಯಗಳನ್ನು ಇವರು ಇಲ್ಲಿ ವರ್ಣಿಸಿದ್ದಾರೆ. ಮಹಾದೇವಪ್ಪಾ ಮೀಸೆಯವರು ಭಾಲ್ಕಿ ತಾಲೂಕಿನ ಲಖಣಗಾಂವದವರು. ಶಿವಮೂರ್ತೆಪ್ಪಾ ಕಲ್ಯಾಣಮ್ಮ ಇವರ ತಂದೆ ತಾಯಿಗಳು. ಏಕಾಂಗಿಯಾಗಿ ಇವರು ಮಾಡಿದ ಅನೇಕ ರಚನಾತ್ಮಕ ಕಾರ್ಯಗಳು ಪುಣ್ಯಾಶೆಟ್ಟಿಯವರು ಬರೆದು ಇಂತಹ ಸರಳ ಜೀವಿಯ ಪರಿಚಯ ಸಮಾಜಕ್ಕೆ ಮಾಡಿಕೊಟ್ಟು ಉಪಕರಿಸಿದ್ದಾರೆ.

ಸಮಾಜವಾದಿ ಹೋರಾಟಗಾರರಾದ ವೈಜಿನಾಥ ಪಾಟೀಲರು ಔರಾದ ತಾಲೂಕಿನ ಹಕ್ಯಾಳದವರು. ಪಾಟೀಲ ಮನೆತನದ ಸಂಗಪ್ಪ ಹಾಗೂ ಚಿಮಣಾಬಾಯಿಯವರು ಇವರ ತಂದೆ ತಾಯಿಗಳು. ಅವರು ಜನ್ಮ ವೆತ್ತಿದ್ದು ೨೧-೦೩-೧೯೪೧ ಇವರ ವಿದ್ಯಾಭ್ಯಾಸ ಕಮಲನಗರ ಹಾಗೂ ಬೀದರನ ಬಿ.ವಿ.ಬಿ. ಕಾಲೇಜು , ಕಲಬುರ್ಗಿಯಲ್ಲೂ ಕಾನೂನು ಪದವಿ ಪಡೆದರು. ಶಿಕ್ಷಕರಾಗಿ ಎರಡು ವರ್ಷ ಸೇವೆ ಸಲ್ಲಿಸಿದ ನಂತರ ರಾಜಕಾರಣದಲ್ಲೂ ಸೇರಿದ್ದು ಮಂತ್ರಿಗಾಯಾವ ಸುಯೋಗ ಇವರಿಗೆ ದೊರಕಿದ್ದು, ಇವರ ಕಾರ್ಯಕ್ಷೇತ್ರ, ಕಲ್ಬುರ್ಗಿ ಜಿಲ್ಲೆಯ ಚಿಂಚೋಳಿ. ಶ್ರೀಮತಿ ಜ್ಞಾನ ಶಾಲಿ

ಯವರೊಂದಿಗೆ ವಿವಾಹವಾದದ್ದು, ಮನೆ ಅಳಿಯನಾಗಿ ಚಿಂಚೋಳಿಯಲ್ಲಿ ವಾಸಿಸಿದ್ದು, ಹೈದರಾಬಾದ ಕರ್ನಾಟಕ ಜನತೆಯ ಶ್ರೇಯೋಭಿವೃದ್ಧಿಗಾಗಿ ಹಗಲಿರುಳು ದುಡಿಯುತ್ತಲಿದ್ದಾರೆ. ಇವರು ಕರ್ನಾಟಕ ರಾಜ್ಯದ ಜನರಿಗೆಲ್ಲ ಹೋರಾಟಗಾರರೆಂದು ಚಿರಪರಿಚಿತರಾಗಿದ್ದರೆಂದು ಲೇಖಕರು ವರ್ಣಿಸಿದ್ದಾರೆ.

ಬಡವರ ಬಂದು ಕಾಶಿನಾಥ ಬೇಲುರೆಯವರು ಔರಾದ ತಾಲೂಕಿನ ಮದನೂರು ಗ್ರಾಮದವರು. ಇವರ ಜನನ ೧೯೩೨ ತಂದೆ ಗುರಪ್ಪಾ ತಾಯಿ ಸಂಗಮ್ಮ. ಇವರು ಹೈದ್ರಾಬಾದ ಚಾದರಘಾಟ ಕಾಲೇಜಿನಿಂದ ಪದವಿಧರರಾಗಿ ಕಲ್ಬುರ್ಗಿಯಲ್ಲಿ ಕಾನೂನು ಪದವಿ ಪಡೆದದ್ದು ಇವರು ಬ್ರಹ್ಮಚಾರಿಗಳು, ತಮ್ಮ ಊರಿನಲ್ಲಿ ಅಸ್ಪೃಶ್ಯತೆಯ ವಿರೋಧಿ ಅಂಧೋಲನ ಪ್ರಾರಂಭಿಸಿದ್ದು, ಪೆಟ್ಟು ತಿಂದದ್ದು, ಜನರು ಬಹಿಷ್ಕಾರ ಹಾಕಿದ್ದು ಹರಿಜನರಿಗೆ ಕೆಲಸಕ್ಕೆ ಕರೆಯದೆ ಇದ್ದಾಗ ಆ ಊರಿನಲ್ಲಿ 'ಫ್ಯುಬರ್ ಸೊಸೈಟ್ಟಿ' ಸ್ಥಾಪಿಸಿದರು. ಹಗ್ಗ ಹೊಸೆಯುವುದು, ರಗ್ಗು ತಯಾರು ಮಾಡುವುದು, ಮೊದಲಾದ ಕೆಲಸವನ್ನು ಹರಿಜನರಿಗಾಗಿ ಒದಗಿಸಿಕೊಟ್ಟದನ್ನ ಈ ಲೇಖನದಲ್ಲಿ ಬಂದಿದೆ. ಇವರು ಆರ್.ಆರ್.ಕೆ.ಶಿಕ್ಷಣ ಸಂಸ್ಥೆ ಸ್ಥಾಪಿಸಿ ಅದರಡಿಯಲ್ಲಿ ಅನೇಕ ಶಾಲಾ ಕಾಲೇಜುಗಳನ್ನು ಸ್ಥಾಪಿಸಿದ್ದು ರೈತರ ಪರವಾಗಿ ಅನೇಕ ಚಳುವಳಿಗಳನ್ನು ಮಾಡಿದ್ದು ತುರ್ತು ಪರಿಸ್ಥಿತಿಯಲ್ಲಿ ಹದಿನೆಂಟು ತಿಂಗಳ ಕಾಲ ಬೆಂಗಳೂರಿನ ಜೈಲಿನಲ್ಲಿದುದ್ದು ಎಲ್.ಕೆ. ಅಡಾವಣಿ ಶಾಂತಿ ಭೂಷಣ, ಜೆ.ಎಚ್. ಪಟೇಲರ ಸಂಪರ್ಕ ಇವರು ಸಂಪಾದಿಸಿದ್ದರು. ಚೈನಾ ಸರ್ಕಾರದ ಆಮಂತ್ರಣದ ಮೇರೆಗೆ ಆ ದೇಶಕ್ಕೆ ಹೋಗಿ ತಮ್ಮ ಅನುಭವ ಹೆಚ್ಚಿಸಿಕೊಂಡದ್ದನ್ನು ಪುಣ್ಯಶೆಟ್ಟಿಯವರು ವರ್ಣಣಾತ್ಮಕವಾಗಿ ಬಣ್ಣಿಸಿದ್ದಾರೆ.

ಅರಣ್ಯವನ್ನು ತಾಯಿಯಂತೆ ಕಾಪಾಡಿದ ಕರ್ಕನಳ್ಳಿ ಬೀಟಿನ ಅರಣ್ಯರಕ್ಷಕರಾಗಿದ್ದ ಶ್ರೀ ನಿಜಲಿಂಗಪ್ಪ ಅವರ ವೃಕ್ಷ ಪ್ರೇಮವನ್ನ ಕುರಿತು ಲೇಖಕರು ಮನತುಂಬುವಂತೆ ಚಿತ್ರಿಸಿದ್ದಾರೆ. ಬಿಜಾಪುರ ಇವರ ಜನ್ಮ ಸ್ಥಳ ಹಿಂದುಳಿದ ಕುರುಬ ವರ್ಗಕ್ಕೆ ಸೇರಿದವರು.

ಶ್ರೀಮತಿ ಶಕುಂತಲಾ ವಾಲಿ ಪತಿಸೇವಾ ನಿರತೆಯಾದ ಹಾಗೂ ಉತ್ತರ ಕರ್ನಾಟಕ ಪತ್ರಿಕೆಯ ಒಡತಿಯಾದ ಇವರ ಪರಿಚಯವನ್ನು ಲೇಖನದಲ್ಲಿ ಮಾಡಿಕೊಟ್ಟಿದ್ದಾರೆ.

**ಸಮಾಜವಾದಿ ಹೋರಾಟಗಾರರಾದ ವೈಜಿನಾಥ ಪಾಟೀಲ :**

ಹೈದರಾಬಾದ ಕರ್ನಾಟಕದ ಹೆಮ್ಮೆಯ ಪುತ್ರರಾದ ಶ್ರೀ ವೈಜಿನಾಥ ಪಾಟೀಲ ಅವರ ಜೀವನ ಚರಿತ್ರೆಯನ್ನು ಪಂಚಾಕ್ಷರಿ ಪುಣ್ಯಶೆಟ್ಟಿಯವರು ಈ ಚಿಕ್ಕ ಪುಸ್ತಕದಲ್ಲಿ ಹಿಡಿದು ಇಟ್ಟಿದ್ದಾರೆ. ಆದರ್ಶ ಮುಖಂಡರಲ್ಲಿರಬೇಕಾದ ಧೈರ್ಯ, ಆತ್ಮ ವಿಶ್ವಾಸ, ಸೇವಾ ಮನೋಭಾವದ ಗುಣಗಳನ್ನು ಈ ಪುಸ್ತಕದಲ್ಲಿ ಚಿತ್ರಿಸಲಾಗಿದೆ. ಅವರ ಜೀವನದ ಉದ್ದೇಶವೇ ಹೈದರಾಬಾದ ಕರ್ನಾಟಕದ ಅಭಿವೃದ್ಧಿಗಾಗಿ ಮೀಸಲಿಟ್ಟದ್ದನ್ನು ಇಲ್ಲಿ ವರ್ಣಿಸಲಾಗಿದೆ. ಇವರು ಜಯಪ್ರಕಾಶ ನಾರಾಯಣ, ರಾಮ ಮನೋಹರ ಲೋಹಿಯಾ ಮುಂತಾದ ಸಮಾಜವಾದಿ ಹೋರಾಟಗಾರರಿಂದ ಸ್ಫೂರ್ತಿ ಪಡೆದಿದ್ದಾರೆ. "ಈ ಚರಿತ್ರೆ ಹೈದರಾಬಾದ ಕರ್ನಾಟಕ ಭಾಗದ ಸಾಮಾಜಿಕ, ಸಾಂಸ್ಕೃತಿಕ, ಐತಿಹಾಸಿಕವಾದ ಆಕರ ಗ್ರಂಥವಾಗಿದೆ"[೧]

೧) ಸಮಾಜವಾದಿ ಹೋರಾಟಗಾರ ವೈಜಿನಾಥ ಪಾಟೀಲ. ಮುನ್ನುಡಿ.

ಎಂದು ವೀರೇಂದ್ರ ಸಿಂಪಿಯವರು ಹೇಳಿದ್ದಾರೆ. ಈ ಚರಿತ್ರೆಯು ೧೯೯೮ರಲ್ಲಿ ಪ್ರಕಟಗೊಂಡಿದೆ.

ವೈಜನಾಥ ಪಾಟೀಲರು ಔರಾದ ತಾಲೂಕಿನ ಹಕ್ಯಾಳ ಗ್ರಾಮದಲ್ಲಿ ಜನಿಸಿದರು. ಪಾಟೀಲ ಮನೆತನದವರು. ತಂದೆ ಸಂಗಪ್ಪಾ ಪಾಟೀಲ, ತಾಯಿ ಚಿಮಣಾಬಾಯಿ. ೧೯೪೧ರಲ್ಲಿ ಜನಿಸಿದರು. ಆಗ ಭಾರತ ದೇಶವಿನ್ನೂ ಸ್ವಾತಂತ್ರ್ಯವಾಗಿರಲಿಲ್ಲ. ಕಮಲನಗರದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ ಬೀದರನ ಮಲ್ಟಿಪರ್ಪಸ್ ಹೈಸ್ಕೂಲಿನಲ್ಲಿ ಅಭ್ಯಾಸ ಮಾಡಿದ್ದರು. ವಿದ್ಯಾರ್ಥಿ ಜೀವನದಲ್ಲಿಯೇ ಬೀದರನಲ್ಲಿ ಜರಗುತ್ತಿರುವ ಅನೇಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಬೀದರನಲ್ಲಿ ಪಾಲಿಟೆಕ್ನಿಕ ಕಾಲೇಜು ಬೇಡಿಕೆಗಾಗಿ ಹೋರಾಡಿದರು. ಆಗ ಬಿ .ಡಿ. ಜತ್ತಿಯವರು ಮುಖ್ಯಮಂತ್ರಿಯಾಗಿದ್ದರು. ಭೂಮರೆಡ್ಡಿ ಕಾಲೇಜು ೧೯೬೦ ರಲ್ಲಿ ಪ್ರಾರಂಭವಾಗಲು ಬಹಳ ದೊಡ್ಡ ಚಳುವಳಿ ನಡೆಯಬೇಕಾಗಿತ್ತು. ಆ ಹೋರಾಟದಲ್ಲಿ ಇವರು ಭಾಗವಹಿಸಿದ್ದರೆಂದು ಈ ಪುಸ್ತಕದಲ್ಲಿ ಬಂದಿದೆ.

ಕಮಾಲನಗರದಲ್ಲಿ ಮಹಾರಾಷ್ಟ್ರ ಏಕೀಕರಣ ಸಮಿತಿಯವರು ಒಂದು ಬೃಹತ್ ಸಭೆ ಏರ್ಪಡಿಸಿದ್ದರು. ಕರ್ನಾಟಕಕ್ಕೆ ಸೇರಿದ ಕಮಾಲನಗರದಲ್ಲಿ ಏಕೀಕರಣ ಸಮಿತಿಯವರು ಸಭೆ ನಡೆಸುವುದು ದುರುದ್ದೇಶದಿಂದ ಕೂಡಿತ್ತು. ವೈಜನಾಥ ಪಾಟೀಲರು ಆಗ ಹೈಸ್ಕೂಲ್ ವಿದ್ಯಾರ್ಥಿಗಳಾಗಿದ್ದರು. ವಿದ್ಯಾರ್ಥಿಗಳ ಗುಂಪು ಕಟ್ಟಿಕೊಂಡು ಇದರ ವಿರುದ್ಧ ಪ್ರತಿಭಟನಾರ್ಥಕವಾಗಿ ಕಮಲನಗರಕ್ಕೆ ಹೋದ ಫಲವಾಗಿ ಔರಾದ ತಾಲೂಕಿನ ಯಾವ ಭಾಗವು ಮಾಹಾರಾಷ್ಟ್ರಕ್ಕೆ ಸೇರಲಿಲ್ಲ. ಮಹಾರಾಷ್ಟ್ರ ಏಕೀಕರಣ ಸಮಿತಿಯರ ಕುತಂತ್ರ ಫಲಿಸದಂತೆ ಮಾಡಿದ ವೀರೋಚಿತ ಘಟನೆಯನ್ನು ಲೇಖಕರು ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ವೈಜನಾಥ ಪಾಟೀಲರು ಹೈಸ್ಕೂಲ್ ಅಭ್ಯಾಸ ಮುಗಿದ ನಂತರ ಬೀದರನ ಹಳ್ಳದಕೇರಿ ಮತ್ತು ಚಿಟ್ಟಾ ಪ್ರಾಥಮಿಕ ಶಾಲೆಯಲ್ಲಿ ಸುಮರು ಮೂರು ವರ್ಷಗಳ ಕಾಲ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದರು. ಇವರ ಅಂದಿನ ಸಹಪಾಠಿಗಳಾದ ಹಣಮಂತಪ್ಪಾ ಪಾಟೀಲರು ಇವರ ಸ್ವಭಾವದ ಬಗ್ಗೆ ಹೀಗೆ ಹೇಳಿದ್ದುಂಟು. ವೈಜನಾಥ ಪಾಟೀಲರಲ್ಲಿ ವಿದ್ಯಾರ್ಥಿಗಳಾಗಿದ್ದಾಗಲೇ ಮುಖಂಡತ್ವದ ಲಕ್ಷಣಗಳಿದ್ದವು. ಮಿತಭಾಷಿಗಳು. ಸಿಕ್ಕ ಹಾಗೆ ಹರಟೆ ಕೊಚ್ಚುವರಲ್ಲ. ಖಾದಿ ಉಡುಪು, ಪಂಚೆ, ಅಂಗಿಯೇ ಅವರ ಪೋಷಾಕು ಎಂದು ಪಂಚಾಕ್ಷರಿಯವರು ಈ ಚರಿತ್ರೆಯಲ್ಲಿ ಮೂಡಿಸಿದ್ದಾರೆ. ವಿದ್ಯಾರ್ಥಿಗಳಿದ್ದಾಗಲೇ ಭೂರಹಿತ ಹರಿಜನರಿಗೆ ಸರ್ಕಾರಿ ಭೂಮಿಯನ್ನು ದೊರಕಿಸಿಕೊಡಲು ಆಂಧೋಲನದಲ್ಲಿ ಭಾಗವಹಿಸಿದ್ದರು. ಧನ್ನೂರು, ಐನಾಪೂರು ಹಾಗೂ ಎದಲಾಪೂರ ಹಳ್ಳಿಗಳಿಗೆ ಸೋಸಿಯಾಲಿಸ್ಟ್ ಪಾರ್ಟಿಯ ಮೋರ್ಚಾ ತೆಗೆದುಕೊಂಡು ಹೋಗಿ ಭೂರಹಿತರಿಗೆ ಭೂಮಿ ಕಬ್ಜಾ ದೊರಕಿಸಿ ಕೊಟ್ಟ ಧೀರರು. ಮುಂದೆ ಇವರು ಶಿಕ್ಷಕ ವೃತ್ತಿಯನ್ನು ತ್ಯಜಿಸಿ ಕಲ್ಬುರ್ಗಿ ಎಸ್. ಎಸ್. ಲಾಹೋಟಿ ಲಾ ಕಾಲೇಜಿನಲ್ಲಿ ಕಾನೂನು ಪದವಿಯನ್ನು ಪಡೆದರು. ವಕೀಲಿ ವೃತ್ತಿ ಮಾಡಿದರು.

ಚಿಂಚೋಳಿಯ ಪಾಟೀಲ ಮನೆತನದ ಜ್ಞಾನೇಶ್ವರಿಯವರೊಂದಿಗೆ ವಿವಾಹವಾಯಿತು. ಅವರು ಚಿಂಚೋಳಿ ಪಾಟೀಲ ಮನೆತನಕ್ಕೆ ದತ್ತು ಹೋದರು. ಆದರೂ ಜನ್ಮ ಕೊಟ್ಟ ಜಿಲ್ಲೆಗೆ ಮರೆತವರಲ್ಲ. ಬೀದರ ಹಾಗೂ ಕಲ್ಬುರ್ಗಿ ಜಿಲ್ಲೆಯ ಮಧ್ಯ ಸಂಪರ್ಕ ಸೇತುವೆಯಂತೆ ಜನ ಸೇವೆಯಲ್ಲಿ ತೊಡಗಿದ್ದಾರೆ. ೧೯೭೫

ರ ಜೂನ ೨೬ ರಂದು ಇಂದಿರಾ ಗಾಂಧಿ ತುರ್ತು ಪರಿಸ್ಥಿತಿ ಘೋಷಿಸಿದಾಗ ರಹಸ್ಯವಾಗಿ ಸರ್ಕಾರದ ವಿರುದ್ಧ ಕೆಲಸ ಮಾಡಿದರು. ಜಾರ್ಜ ಫರ್ನಾಂಡಿಸ್‌ರ ಸ್ನೇಹ ಸಂಪಾದಿಸಿದವರಾಗಿದ್ದಾರೆ. ತುರ್ತು ಪರಿಸ್ಥಿತಿಯ ನಂತರ ಇವರು ಕಲಬುರ್ಗಿ ಜಿಲ್ಲೆಯ ಜನತಾ ಪಾರ್ಟಿಯ ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆಯ್ಕೆ ಮಾಡಲಾಗಿತ್ತು. ಅವರ ಪರಿಶ್ರಮದ ಫಲವಾಗಿಯೇ ಕಲ್ಬುರ್ಗಿ ಜಿಲ್ಲೆಯಲ್ಲಿ ಜನತಾ ಪಕ್ಷವು ೧೯೮೩ರ ಚುನಾವಣೆಯಲ್ಲಿ ಪ್ರಚಂಡ ಬಹುಮತ ಪಡೆಯಿತು. ಕಲ್ಬುರ್ಗಿ ಜಿಲ್ಲೆಯಲ್ಲಿ ಜನತಾ ಪಕ್ಷ ಜೀವಂತ ಉಳಿದದ್ದು ವೈಜಿನಾಥ ಪಾಟೀಲರಿಂದ ಎಂದು ಅಖಿಲ ಭಾರತ ಜನತಾ ಪಕ್ಷದ ಅಧ್ಯಕ್ಷರಾಗಿದ್ದ ಚಂದ್ರಶೇಖರ ಪಾಟೀಲರ ಹೇಳಿಕೆಯನ್ನು ಪುಣ್ಯಶೆಟ್ಟಿಯವರು ಚರಿತ್ರೆಯಲ್ಲಿ ಬರೆದಿದ್ದಾರೆ.

ಎರಡು ಸಲ ಚುನಾವಣೆಯಲ್ಲಿ ಸೋತರೂ ೧೯೮೮ರಲ್ಲಿ ಶಿಕ್ಷಕರ ಈಶಾನ್ಯ ಮತಕ್ಷೇತ್ರದಿಂದ ವಿಧಾನ ಪರಿಷತ್ತಿಗೆ ಆಯ್ಕೆಗೊಂಡರು. ಅಂದಿನ ಮುಖ್ಯ ಮಂತ್ರಿಗಳಾದ ರಾಮಕೃಷ್ಣ ಹೆಗಡೆಯವರು ಇವರನ್ನು ಮಂತ್ರಿ ಮಂಡಲದಲ್ಲಿ ತೆಗೆದುಕೊಂಡರು.

ಮೈಸೂರಿನ ಅರಸರಂತೆ ಹೈದರಾಬಾದ ರಾಜ್ಯದ ನಿಜಾಮನು ಇಲ್ಲಿಯ ಜನರಿಗೆ ಶಿಕ್ಷಣದ ಸೌಲಭ್ಯ ಕೊಡಲಿಲ್ಲ. ಆಡಳಿತ ಭಾಷೆ ಉರ್ದುವಿನಲ್ಲಿ ಶಿಕ್ಷಣ ಕೊಡಲಾಗುತ್ತಿತ್ತು. ಇದಲ್ಲದೆ ಕರ್ನಾಟಕ ಏಕೀಕರಣವಾದ ಬಳಿಕ ಅನೇಕ ವರ್ಷಗಳ ಕಾಲ ರಾಜ್ಯದ ಆಡಳಿತ ಮೈಸೂರಿನವರ ಕೈಯಲ್ಲಿತ್ತು. ಇಲ್ಲಿಂದ ಆರಿಸಿದ ಶಾಸಕರಲ್ಲಾಗಲಿ, ಸಂಸತ್ತು ಸದಸ್ಯರಲ್ಲಾಗಲಿ ಹೋರಾಟದ ಮನೋಭಾವ ಇರಲಿಲ್ಲ. ನಾಯಕತ್ವದ ಅಭಾವದಿಂದ ಇವರು ಸರಕಾರದ ಗಮನ ಸೆಳೆಯುವಲ್ಲಿ ವಿಫಲರಾದರು. ನೀರಾವರಿ ಯೋಜನೆಗಳು ಪೂರ್ಣಗೊಳ್ಳಲಿಲ್ಲ. ರೈತರ ಆರ್ಥಿಕ ಮಟ್ಟವು ಇದರಿಂದ ಹೆಚ್ಚಾಗಲಿಲ್ಲ. ಇವೆಲ್ಲ ಕಾರಣದಿಂದ ಈ ಭಾಗವು ಮೈಸೂರು ಭಾಗಕ್ಕಿಂತಲೂ ಹಿಂದುಳಿತೆಂದು ಈ ಚರಿತ್ರೆಯಿಂದ ತಿಳಿದು ಬರುತ್ತದೆ.

ಹೈದಾರಾಬಾದ ಕರ್ನಾಟಕದ ಅಭಿವೃದ್ಧಿ ಮಂಡಳಿಗೆ ಇವರು ಜೀವ ತುಂಬಿದರು. ಹೈದರಾಬಾದ ಕರ್ನಾಟಕ ಜನರ ಹಕ್ಕುಗಳಿಗಾಗಿ ಒತ್ತಾಯ ಮಾಡಿದರು. ಅವರ ಮನವಿಗೆ ಸೂಕ್ತ ಮಾನ್ಯತೆ ದೊರೆಯದ ಕಾರಣ ಸಚಿವ ಸ್ಥಾನಕ್ಕೆ ರಾಜಿನಾಮೆ ಸಲ್ಲಿಸಿ ಮಂತ್ರಿ ಮಂಡಲದಿಂದ ಹೊರಗೆ ಬಂದರು. ಇದು ಹೈದರಾಬಾದ ಕರ್ನಾಟಕ ಅಭಿವೃದ್ಧಿಗೆ ಮಾಡಿದ ಮೊದಲ ಮಹತ್ವದ ತ್ಯಾಗವೆಂದು ಲೇಖಕರು ಚರಿತ್ರೆಯಲ್ಲಿ ಬಣ್ಣಿಸಿದ್ದಾರೆ.



ಇವರ ಹೋರಾಟದ ಫಲವಾಗಿ ಹೈದರಾಬಾದ ಕರ್ನಾಟಕ ಇಂಜನಿಯರರಿಗೆ ಮಾತ್ರ ಅಪ್ಪರ್ ಕೃಷ್ಣಾ ಯೊಜನೆಯಲ್ಲಿ ನೌಕರಿ ದೊರೆತವು. ಇವರ ಇನ್ನೂ ಬೇಡಿಕೆಗಳೆಂದರೆ ಸಿ. ಗುಂಪಿನ ನೌಕರರಿಗೂ ಕೂಡ ಇದೇ ಭಾಗದವರಿಗೆ ನೌಕರಿ ಕೊಡಬೇಕು. ಇದೇ ರೀತಿ ವಿಶ್ವವಿದ್ಯಾಲಯಗಳಲ್ಲಿ, ಮೇಡಿಕಲ್ ಮತ್ತು ಇಂಜಿನಿಯರಿಂಗ್ ಸೀಟುಗಳು ಕೊಡಬೇಕೆಂದು ಸರ್ಕಾರದೊಂದಿಗೆ ಸೆಣಸುತ್ತಿದ್ದಾರೆ.

ಶಿಕ್ಷಕರಿಂದ ಆಯ್ಕೆಯಾದ ಇವರು ಶಿಕ್ಷಕರ ವೇತನ ಶ್ರೇಣಿ ಹೆಚ್ಚುವಂತೆ ಮಾಡಿದರು. ೧೯೯೭ರಲ್ಲಿ ವೈಜಿನಾಥ ಪಾಟೀಲರು ಮತ್ತೆ ಚುನಾವಣೆಯಲ್ಲಿ ಆರಿಸಿ ಬಂದರು. ಆಗ ದೇವೇಗೌಡರು ರಾಜ್ಯದ ಮುಖ್ಯ ಮಂತ್ರಿಗಳಾಗಿದ್ದರು. ಪಾಟೀಲರು ಮತ್ತೆ ನಗರಾಭಿವೃದ್ಧಿ ಖಾತೆಯ ಮಂತ್ರಿಗಳಾದರು. ಇಲ್ಲಿಯ ವಿದ್ಯಾರ್ಥಿಗಳು ಮೈಸೂರಿನ ಭಾಗದ ವಿದ್ಯಾರ್ಥಿಗಳೊಡನೆ ಸ್ಪರ್ಧಿಸುವ ಸಾಮರ್ಥ್ಯ ಇವರಲ್ಲಿ ಇಲ್ಲದ

ಕಾರಣ ವಿಭಾಗ ಮಟ್ಟದಲ್ಲಿ ನೌಕರಿ ಕೊಡಬೇಕೆಂದು ಪ್ರಯತ್ನಿಸುತ್ತಿದ್ದಾರೆ. ಆಂಧ್ರಪ್ರದೇಶ, ಮಹಾರಾಷ್ಟ್ರದಲ್ಲಿದ್ದಂತೆ ಹೈದರಾಬಾದ ಕರ್ನಾಟಕದಲ್ಲಿಯೂ ಕೂಡ ೩೭೧ ಕಲಂ ಪ್ರಕಾರ ವಿಶೇಷ ಪ್ರಾತಿನಿಧ್ಯ ಕೊಡಬೇಕೆಂದು ಅಹೋರಾತ್ರಿ ಹೋರಾಟದಲ್ಲಿ ತೊಡಗಿರುವದನ್ನು ಲೇಖಕರು ಅನನ್ಯವಾಗಿ ಪಾಟೀಲರ ಕಾರ್ಯವನ್ನು ಕುರಿತು ವರ್ಣಿಸಿದ್ದಾರೆ.

**ಮಹಾಯೋಗಿಣಿ ಚಕ್ರಕೋಟ ಬಾಯವ್ವ :**

ಈ ಚರಿತ್ರೆಯನ್ನು ೧೯೯೮ರಲ್ಲಿ ಪ್ರಕಟ ಪಡಿಸಿದ್ದಾರೆ. ಅಲ್ಲದೆ ಇದು ಹಿಂದಿ ಭಾಷೆಗೂ ಭಾಷಾಂತರವಾಗಿದ್ದು ಈ ಕೃತಿಯ ವೈಶಿಷ್ಟ್ಯವಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಬೀದರ ಜಿಲ್ಲೆಯಲ್ಲಿ ಅನೇಕ ಶರಣ ಶರಣೆಯರು ಬಾಳಿ ಬದುಕಿದ್ದಾರೆ. ಅಲ್ಲಿಂದ ಈಚೆಗೆ ಅವರು ನಡೆದು ಬಂದ ದಾರಿಯಲ್ಲಿ ಅನೇಕ ಶರಣ ಶರಣೆಯರು ನಡೆಯುತ್ತಾ ಬಂದಿದ್ದಾರೆ. ಮತ್ತು ನಡೆಯುತ್ತಿದ್ದಾರೆ. ಯಾವುದೇ ಒಂದು ಗ್ರಾಮದ ಜನಸಂಖ್ಯೆ ಹೆಚ್ಚಾದರೆ ಅದು ಶ್ರೇಷ್ಠವಾಗುವುದಿಲ್ಲ. ಆ ಗ್ರಾಮದ ಜನರು ಸತ್ಯವಂತರು, ನಿಷ್ಠಾವಂತರು, ಕಾಯಕನಿರತರು ಆಗಿರಬೇಕಾಗುತ್ತದೆ. ಅಲ್ಲದೆ ಊರಿಗೊಬ್ಬ ಶರಣ ಶರಣೆಯರಾದರೂ ಇರಬೇಕು. ಅಂದಾಗ ಮಾತ್ರ ಆ ಗ್ರಾಮದ ವರ್ಚಸ್ಸು ಹೆಚ್ಚಾಗುತ್ತದೆ. ಲೇಖಕರು ಬೀದರ ಜಿಲ್ಲೆಯಲ್ಲಿ ಬಾಳಿ ಬದುಕಿದ ಅನೇಕ ಶರಣ ಶರಣೆಯರ ಹೆಸರನ್ನು ಈ ಕೃತಿಯಲ್ಲಿ ಸ್ಮರಿಸಿದ್ದಾರೆ. ಈ ಚರಿತ್ರೆಯ ನಾಯಕಿಯಾದ ಚಕ್ರಕೋಟಿ ಬಾಯವ್ವಳು ಭಾಲ್ಕಿ ತಾಲೂಕಿನ ಲಖಣಗಾಂವ ಗ್ರಾಮದಲ್ಲಿ ಅವತರಿಸಿ ಬಂದಿದ್ದಾರೆ. ಈ ಗ್ರಾಮದ ವಿವರಣೆಯನ್ನು ಕೊಡುವಾಗ ನಿಜವಾದ ನೈಸರ್ಗಿಕ ಪ್ರಕೃತಿಯ ಬಗ್ಗೆ ಲೇಖಕರು ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ಚಕ್ರಕೋಟಿ ಬಾಯವ್ವಳ ಪೂರ್ವಿಕರು ಕಲ್ಯಾಣದಿಂದ ಲಖಣಗಾಂವಕ್ಕೆ ಬಂದು ನೆಲೆಸಿದ್ದನ್ನು ಲೇಖಕರು ತಿಳಿಸಿದ್ದಾರೆ. ಶಿವಮೂರ್ತಿ ಮತ್ತು ಪಾರ್ವತಿಯವರಿಗೆ ಮಕ್ಕಳಿಲ್ಲದ ಕಾರಣ ಕೊರಗುತ್ತಿದ್ದರು. ಅವರು ದೇವರಲ್ಲಿ ಮೊರೆ ಇಟ್ಟರು. ನಮಗೆ ಹುಟ್ಟಿದ ಮೊದಲ ಮಗುವು ಜಂಗಮರಿಗೆ ಕೊಡುವುದಾಗಿ ಬೇಡಿಕೊಂಡರು. ದೇವರ ಅನುಗ್ರಹದಿಂದ ಒಬ್ಬ ಹೆಣ್ಣು ಮಗಳು ಹುಟ್ಟಿದಳು. ಅವಳ ನಾಮಕರಣಕ್ಕೆಂದು ಗುರುಗಳು ಹುಲಸೂರಿನಿಂದ ಬಂದು ಮಗುವನ್ನು ಕಂಡು ಸಂತೋಷದಿಂದ 'ಬಾಯವ್ವ' ಎಂದು ಕರೆದರು. ಇದೇ ಹೆಸರುನ್ನು ಮನೆಯವರು ಕರೆಯಲು ಪ್ರಾರಂಭಿಸಿದರು.

ಎಮ್ಮವರು ಬೆಸಗೊಂಡರೆ ಶುಭ ಲಗ್ನವೆನ್ನಿರಯ್ಯಾ
ರಾಶಿ ಕೂಟ ಋಣ ಸಂಬಂಧ ಉಂಟೆಂದು ಹೇಳಿರಯ್ಯಾ
- ಬಸವಣ್ಣನವರು

ಎಂಬ ವಚನದಂತೆ ಪೂರ್ವದಲ್ಲಿ ಬಾಲ್ಯ ವಿವಾಹ ಪದ್ಧತಿ ಜಾರಿಯಲ್ಲಿತ್ತು. ಆದ ಕಾರಣ ಬಾಯವ್ವಳಿಗೆ ಹರಕೆಯಂತೆ ತಮ್ಮ ಮನೆಯ ಗುರುಗಳಾದ ಹುಲಸೂರಿನ ಚನ್ನಬಸವಯ್ಯನವರ ಮಗನಾದ ಲಿಂಗಯ್ಯನೊಂದಿಗೆ ವಿಜೃಂಭಣೆಯಿಂದ ವಿವಾಹ ನೆರವೇರಿತು. ಈ ಎಲ್ಲ ವಿಷಯಗಳು ಸಾಮಾನ್ಯ ಜನರಿಗೆ ತಿಳಿಯುವಂತೆ ಸರಳ ಭಾಷೆಯಲ್ಲಿ ಲೇಖಕರು ಚಿತ್ರಿಸಿದ್ದಾರೆ.

ಎರಡು ವರ್ಷಗಳ ನಂತರ ಮಗಳನ್ನು ಮನೆಗೆ ಕರೆದು ತಂದದ್ದು, ಅವಳು ಮನೆ ಬಿಟ್ಟು ಹೋಗುವಾಗ ನುಡಿದ ಮಾತುಗಳು, ಮಾವನ ಮನೆಯಲ್ಲಿ ದಾಸೋಹ ಪ್ರಾರಂಭಿಸಿದಳು. ಇದರಿಂದ ಅವರ ಅಂತಸ್ತು ಹೆಚ್ಚಿತು. ಎಲ್ಲವು ಅವರ ಮಾವನ ಮಾತಿನ ಮೂಲಕ "ಹುಟ್ಟಿದ ಮನೆಯವರಿಗೆ ಗುರುವಾದಿ ಕೊಟ್ಟ ಮನಗೆಗೆ ದೇವರಾದಿ"[೧] ಎಂಬ ಮಾತಿನಂತೆ ಅವಳಲ್ಲಿದ್ದ ಭಕ್ತಿ, ಶ್ರದ್ಧೆ ಗುಣವನ್ನು ಲೇಖಕರು ಕಣ್ಣಿಗೆ ಕಟ್ಟುವಂತೆ ತಿಳಿಸಿದ್ದಾರೆ.

ದಾಸೋಹವೆಂಬ ಸೋಹೆಗೊಂಡು ಹೋಗಿ
ಗುರುವ ಕಂಡೆ, ಲಿಂಗವ ಕಂಡೆ, ಜಂಗಮವ ಕಂಡೆ,
ಪ್ರಸಾದವ ಕಂಡೆ ಇಂತಿ ಚತುರ್ವಿಧ ಸಂಪನ್ನನಾದೆ
ಕಾಣಾ ಕೂಡಲ ಸಂಗಮದೇವಾ.

- ಬಸವಣ್ಣನವರು

ಎಂಬ ವಾಣಿಯಂತೆ ವೀರಶೈವ ಧರ್ಮದಲ್ಲಿ ಕಾಯಕ ಮತ್ತು ದಾಸೋಹಕ್ಕೆ ಹೆಚ್ಚಿನ ಮಹತ್ವವಿದೆ. ಇದನ್ನು ಬಾಯವ್ವ ಚಾಚು ತಪ್ಪದೆ ಮಾಡುತ್ತಿದ್ದಳು. ಬಾಯವ್ವಳು ಹೀಗೆ ಮನೆ ಕೆಲಸ, ಹೊಲದ ಕೆಲಸ ಜೊತೆಗೆ ದಾಸೋಹವನ್ನು ನಡೆಸಿಕೊಂಡು ಬರುತ್ತಿದ್ದಳು. ಹೀಗೆ ಅವಳು ಪಾರಮಾರ್ಥ ಮತ್ತು ಪ್ರಪಂಚ ಎರಡನ್ನು ನಡೆಸಿಕೊಂಡು ಬರುತ್ತಿದ್ದಳು. ಇದರಿಂದ ಅವಳ ಕಾಯಕ ನಿಷ್ಠೆಯನ್ನು ಲೇಖಕರು ಬಣ್ಣಿಸಿದ್ದಾರೆ.

ಬಾಯವ್ವಳಿಗೆ ಮುಂದೆ ಒಂದು ಕೂಸು ಜನಿಸುತ್ತದೆ. ಅದಕ್ಕೆ ಚನ್ನಬಸವ ಎಂದು ನಾಮಕರಣ ಮಾಡುವರು. ಈ ಮಗು ದೊಡ್ಡವನಾಗುವಷ್ಟರಲ್ಲಿ ತಂದೆ ಲಿಂಗೈಕ್ಯರಾದರು. ಹೀಗೆ ಮಗನೊಂದಿಗೆ ಸಂತೋಷವಾಗಿ ದಾಸೋಹ ನಡೆಸುತ್ತಿದ್ದಳು. ಯಾರಾದರೂ ತನ್ನಲ್ಲಿದ್ದುದ್ದನ್ನು ಕೇಳಿದರೆ ಹಿಂದೆ ಮುಂದೆ ನೋಡದೆ ಕೊಡುತ್ತಿದ್ದಳು. ಒಂದು ದಿನ ತಾಯಿ ಸೀರೆಯನ್ನು ದಾನ ಮಾಡುವುದನ್ನು ಮಗ ನೋಡಿ ಸಿಟ್ಟಿನಿಂದ ಏನವ್ವಾ ಹಿಂಗ ಮಾಡಿದರ ಮನಿ ಹ್ಯಾಂಗ ನಡೆದೀತು. ಮುಂದೆ ನನ್ನ ಸಂಸಾರ ಹ್ಯಾಂಗ ಸಾಗಿತು. ಮನ್ಯಾಗ ಇದ್ದ ಸೀರಿ ಎಲ್ಲ ಕೊಟ್ಟಿದ್ದರೆ ನಾಳೆಗೆ ಮತ್ತೊಬ್ಬರು ಬಂದು ಕೇಳಿದರೆ ಮೈಮ್ಯಾಲಿನ ಸೀರೆ ಕೊಡ್ತಿ ಏನು? ಎಂದು ನುಡಿದನು. ಇದರಿಂದ ಬಾಯವ್ವಳ ಮನಸ್ಸು ನೊಂದಿತು. "ಆಗಲಿ ಮಗ ನೀ ಅಂದ್ಹಂಗ ಆಗಲಿ. ಆಗ ಅಪ್ಪನ ಮನಿ ಬಿಟ್ಟೆ, ಈಗ ನಿನ್ನ ಮನಿ ಬಿಟ್ಟೆ, ಈಗ ಶಿವನ ಮನಿಗೆ ಹೊರಟೆ"[೨] ಎಂದು ತಿರುಗಿ ನೋಡದೆ ಲಖಣಗಾಂವ ಕಡೆ ಹೊರಟಳು. ಇಲ್ಲಿ ಬಾಯವ್ವಳು ಶರಣರಂತೆ ನುಡಿದಂತೆ ನಡೆ, ನಡೆದಂತೆ ನುಡಿದು ತೋರಿಸಿದ್ದನ್ನು ಲೇಖಕರು ಕೊಂಡಾಡಿದ್ದಾರೆ.

ಅಕ್ಕ ಮಹಾದೇವಿಯು ಸಾವಿಲ್ಲದ ಕೇಡಿಲ್ಲದ ಚಲುವಂಗೆ ಅರಸುತ್ತ ಶ್ರೀಶೈಲಕ್ಕೆ ಹೋದಂತೆ ಬಾಯವ್ವ ಹೊರಟಳು. ಲಖಣಗಾಂವ ಸಮೀಪವಿರುವ ಮಾಂಜಾರಾ ನದಿಯ ದಡದಲ್ಲಿ ಒಂದು ಗುಡ್ಡದಲ್ಲಿ ಗುಡಿಸಲು ಕಟ್ಟಿಕೊಂಡು ಇರಲು ಪ್ರಾರಂಭಿಸಿದರು. ಅಣ್ಣನು ಬಂದು ಮನಿಗೆ ನಡೆ ಎಂದದ್ದು ಇಲ್ಲಿ ವಿವರಿಸಿದ್ದಾರೆ. ಹೀಗೆ ಬಾಯವ್ವಳು ಕಂತಿಭಿಕ್ಷೆ ಹೊಡೆದು ಬಂದುದ್ದನ್ನು ದಾಸೋಹ ಪ್ರಾರಂಭಿಸಿದಳು.

---

೧) ಮಹಾಯೋಗಿಣಿ ಚಕ್ರಕೋಟಿ ಬಾಯವ್ವ. ಪುಟ-೧೫

೨) ಮಹಾಯೋಗಿಣಿ ಚಕ್ರಕೋಟಿ ಬಾಯವ್ವ. ಪುಟ-೨೧

ಇವಳ ದಾಸೋಹಕ್ಕೆ ಸುತ್ತ ಮುತ್ತಲಿನ ಜನರು ಬಂದು ನೆರವಾಗತೊಡಗಿದರು. ಇಲ್ಲಿ ಶರಣರಾದವರು ಕಾಯಕ ಮತ್ತು ದಾಸೋಹವನ್ನು ನಡೆಸುತ್ತಿದ್ದರೆಂದು ಲೇಖಕರು ಬಾಯವ್ವಳ ಚರಿತ್ರೆಯಲ್ಲಿ ತಿಳಿಸಿದ್ದಾರೆ.

ಮಾಂಜ್ರಾ ನದಿಯ ಪಶ್ಚಿಮಕ್ಕಿರುವ ಬಟನಪೂರದಲ್ಲಿ ಪ್ರತಿವರ್ಷ ಶ್ರಾವಣ ಮಾಸದಲ್ಲಿ 'ಕಾನಡೆ' ಎಂಬ ಸ್ವಾಮಿಗಳು ಶಿವಪುರಾಣ ಹೇಳುತ್ತಿದ್ದರು. ಇದನ್ನು ಕೇಳಲು ಪ್ರತಿ ವರ್ಷ ಹೋಗುತ್ತಿದ್ದರು. ಒಂದು ವರ್ಷ ಬಹಳ ಮಳೆ ಬಿದ್ದ ಕಾರಣ ನದಿಯು ತುಂಬಿ ಹರಿಯುತ್ತಿತ್ತು. ಈ ಸಂದರ್ಭದಲ್ಲಿ ಬಾಯವ್ವಳು ಯೋಗ ಮುದ್ರೆ ಹಾಕಿ ನೀರಿನ ಮೇಲೆ ತೇಲಾಡುತ್ತ ಹೋದದ್ದು ಮತ್ತು ಅಲ್ಲಿನ ಜನರು ಅದನ್ನು ಕಂಡು ಅವಳ ವ್ರತ ಭಂಗ ಮಾಡಿದ್ದು, ಇವಳು ಅವರ ಊರುಗಳಿಗೆ ಬರುವುದಿಲ್ಲ ಎಂದು ಹೇಳಿದ್ದು , ಇವಳ ಭಕ್ತಿಯನ್ನು ವರ್ಣನಾತ್ಮಕವಾಗಿ ವಿವರಿಸಿದ್ದಾರೆ. ಅಲ್ಲದೆ ಇವಳ ಭಕ್ತಿಯನ್ನು ಕಂಡು ಸುತ್ತಮುತ್ತಲಿನ ಗ್ರಾಮದ ಜನರು ಇವಳ ದಾಸೋಹದಲ್ಲಿ ಸಹಕರಿಸುವುದನ್ನು ಮತ್ತು ಈ ಮಠದಲ್ಲಿ ಅನ್ನ ದಾಸೋಹದ ಜೊತೆಗೆ ಜ್ಞಾನ ದಾಸೋಹವನ್ನು ಪ್ರಾರಂಭಿಸಿದ್ದನ್ನು ಲೇಖಕರು ಮನಸ್ಸಿಗೆ ಮುಟ್ಟುವಂತೆ ಸ್ತುತಿಸಿದ್ದಾರೆ.

ಜ್ಞಾನ ಬೋಧನೆಗೆಂದು ಅನೇಕ ಮಠಾಧೀಶರು ಬಂದಿದ್ದರು. ಅಂದು ಅಲ್ಲಿಯೇ ತಂಗಿದ್ದರು. ಅದೇ ರಾತ್ರಿ ಕಳ್ಳರು ಬಂದುದನ್ನು ತಿಳಿದ ಬಾಯವ್ವ ಕಳ್ಳರಿಗೆ ಮಠಾಧೀಶರಲ್ಲಿದ್ದ ಉಂಗೂರವನ್ನು ಮತ್ತು ಹಣವನ್ನು ಅವರಿಂದ ತೆಗೆದುಕೊಂಡು ಕಳ್ಳರಿಗೆ ಕೊಡಲು ಬಂದ ಘಟನೆಯನ್ನು ಲೇಖಕರು ಹೊಗಳಿದ್ದಾರೆ. ಅಲ್ಲದೆ ಕಳ್ಳರ ಮನಸ್ಸು ಪರಿವರ್ತನೆಯಾಗಿ ಅವರು ಸ್ವತ: ದಾಸೋಹ ಮಾಡುವಂತೆ ಅವರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿದ್ದಾಳೆ. ಮತ್ತೊಂದು ಸಲ ಒಬ್ಬ ಕಳ್ಳನು ಮಠದಲ್ಲಿದ್ದ ಆಕಳನ್ನು ಕದ್ದೊಯ್ಯುವಾಗ ಅವನ ಕಣ್ಣು ಕಾಣದಾದಾಗ ಬಾಯವ್ವಳು ಅವನನ್ನು ಕರೆದು ಅವನ ಕಣ್ಣು ಬರುವಂತೆ ಮಾಡಿ ಆಕಳ ಜೊತೆಗೆ ಕರುವನ್ನು ಕೊಟ್ಟ ಕಳ್ಳನ ಘಟನೆಯನ್ನು ಲೇಖಕರು ನಿರೂಪಿಸಿದ್ದಾರೆ. ಇಂತಹ ಎರಡು ಘಟನೆಗಳು ಹನ್ನೆರಡನೇ ಶತಮಾನದ ಬಸವಣ್ಣನವರ ಜೀವನದಲ್ಲಿ ಘಟಿಸಿದ್ದನ್ನು ಇಲ್ಲಿ ಸ್ಮರಿಸಬೇಕು.

ಮಠದಲ್ಲಿ ಮುರ್ಗಯ್ಯ ದೇಶಿಕ ಸ್ವಾಮಿಗಳು ಇದ್ದರು. ಹಬ್ಬದ ನಿಮಿತ್ಯ ಮಠದಲ್ಲಿ ಹೋಳಿಗೆ ತಾಯಾರು ಆಗುತ್ತಿತ್ತು. ಆಗ ಒಬ್ಬ ದನ ಕಾಯುವ ಹುಡುಗ ಹಸಿವಿನಿಂದ ಬಂದಾಗ ಅವನಿಗೆ ಹೋಳಿಗೆ ಹೂರಣವನ್ನು ಕೊಟ್ಟರು. ಇದನ್ನು ಕಂಡ ಸ್ವಾಮಿ ಇನ್ನೂ ಜಂಗಮಾರ್ಚನೆ ಆಗದೇ ದನ ಕಾಯುವವನಿಗೆ ಕೊಟ್ಟಿದ್ದರಿಂದ ಮಠ ಬಿಟ್ಟು ಹೋದರು. ಸ್ವಲ್ಪ ದೂರ ಹೋಗುವುದರಲ್ಲಿ ಅವರ ಹೊಟ್ಟೆ ನೋಯಲು ಪ್ರಾರಂಭಿಸಿತು. ಇದನ್ನು ಕಂಡ ಜನರು ಅವರನ್ನು ಮಠಕ್ಕೆ ಕರೆ ತಂದರು. ಆಗ ಹೋಳಿಗೆ ಬುಕಣಿಯಲ್ಲಿ ನೀರು ಕಲೆಸಿ ಕುಡಿಸಿದ್ದರಿಂದ ಹೊಟ್ಟೆ ನೋವು ಮಾಯವಾದ ಘಟನೆಯನ್ನು ಲೇಖಕರು ವಿವರಿಸಿದ್ದಾರೆ. ಅಲ್ಲದೆ ಅವಳು ಮಾಡುವ ಸಮಾಜ ಕಾರ್ಯವನ್ನು ಉಲ್ಲೇಖಿಸಿದ್ದಾರೆ.

ಬಾಯವ್ವನವರ ಚರಿತ್ರೆಯಿಂದ ನೀರನ್ನು ಮಡಿ ಮಾಡಬಾರದೆಂದು ಒಂದು ಘಟನೆಯನ್ನು ವಿವರವಾಗಿ ವರ್ಣಿಸಿದ್ದಾರೆ. ನೀರು ಯಾವಾಗಲು ಶುದ್ಧ ಎಂಬುದನು ಮತ್ತು ಗಂಗಾಮಾತೆಗೆ ಅವಮಾನ ಮಾಡಬಾರದೆಂಬ ಸಂದೇಶವನ್ನು ಅವರ ಜೀವನ ಚರಿತ್ರೆಯಿಂದ ತಿಳಿದುಕೊಳ್ಳಬಹುದು.

ಅಲ್ಲದೆ ಮನಸ್ಸಿದ್ದರೆ ಮಾರ್ಗ ಎಂಬಂತೆ ಅನೇಕ ಪವಾಡಗಳಲ್ಲಿ ಒಂದಾದ ನೀರನ್ನು ತುಪ್ಪವನ್ನಾಗಿ ಮಾಡಿದ್ದು. ತುಪ್ಪವನ್ನು ಮತ್ತೆ ನೀರನ್ನಾಗಿ ಮಾಡಿದ್ದು, ಅವರು ಗಂಗಾ ಮಾತೆಯ ಮೇಲೆ ಇಟ್ಟಂತಹ ಭಕ್ತಿಯೇ

ಕಾರಣ ಎಂಬುದನ್ನು ಲೇಖಕರು ಹೃದಯಂಗಮವಾಗಿ ವರ್ಣಿಸಿದ್ದಾರೆ.

'ಕರಿಯನಿತ್ತಡೆ ಒಲ್ಲೆ ಸಿರಿಯನಿತ್ತಡೆ ಒಲ್ಲೆ' ಎಂಬ ಮಾತಿನಂತೆ ಪ್ರತಿವರ್ಷವು ಬಸವಕಲ್ಯಾಣದ ಜಾತ್ರೆಗೆ ಬಾಯವ್ವನವರು ಹೋಗುತ್ತಿದ್ದರು. ಈ ಜಾತ್ರೆಯಲ್ಲಿ ಮಗನಾದ ಚನ್ನಬಸವಯ್ಯನ ಅಂಗಡಿಯಲ್ಲಿ ಕುಳಿತುಕೊಂಡಿದ್ದಾಗ ಕಲ್ಯಾಣದ ಮುಸಲ್ಮಾನ ಜಾಗಿರದಾರ ಇವರನ್ನು ಕಂಡು ಅವಳ ಪಾದಕ್ಕೆ ನಮಸ್ಕರಿಸಿದನು. ಬಾಯವ್ವಳು ಅವನ ತಲೆಯನ್ನು ಮುಟ್ಟಿ 'ತಣ್ಣಗೆ ಬದುಕಪ್ಪ' ಎಂದು ಆಶೀರ್ವಾದ ಮಾಡಿದಳು. ಇದರಿಂದ ಅವನ ತಲೆ ನೋವು, ಕಣ್ಣು ನೋವು ಮಾಯವಾದವು. ಅದನ್ನು ತಿಳಿದು ಅವನು ಬಾಯವ್ವಳನ್ನು ಕರೆದುಕೊಂಡು ಬರಲು ಹೇಳಿದರು. ಅವಳು ಸಿಗದ ಕಾರಣ ಚನ್ನಬಸವಯ್ಯನಿಗೆ ಕರೆದುಕೊಂಡು ಹೋದರು. ಅಲ್ಲಿ ನಿಮಗೆ ಏನು ಬೇಕು ಕೇಳಿರಿ ನಿಮ್ಮ ಮನದಿಚ್ಛೆಯನ್ನು ಪೂರ್ಣಗೊಳಿಸಲಾಗುವುದು ಎಂದು ಹೇಳಿದರು. ಆಗ ಚೆನ್ನಬಸವಯ್ಯನು ಆನೆಯನ್ನು ಬೇಡಿದನು. ಆನೆಯನ್ನು ತೆಗೆದುಕೊಂಡು ಬಂದು ಮನೆಯಲ್ಲಿ ಕಟ್ಟಿ ತಾಯಿಗೆ ತಿಳಿಸಲು ಹೋದನು. ಆಗ ಬಾಯವ್ವ ಮಗನ ಆಸೆಯನ್ನು ಕಂಡು ವ್ಯಥೆ ಪಟ್ಟಳು. 'ಆಸೆ ಅರಸಂಗಲ್ಲದೆ ಶಿವಭಕ್ತರಿಗೆ ಉಂಟೆ ಅಯ್ಯಾ' ಎಂಬ ಮಾತಿನಂತೆ ಆಸೆ ಅರಸರಿಗೆ ಇರುತ್ತದೆ. ಶಿವಭಕ್ತರಿಗೆ ಆಸೆ ಇರಬಾರದು ಎಂದು ಮಗನಿಗೆ ಹೇಳಿದರು. ನೀನು ಮನೆಗೆ ಹೋಗುವಷ್ಟರಲ್ಲಿ ಆನೆ ಮೋಕ್ಷ ಹೊಂದುವುದು ಎಂದು ಹೇಳಿದರು. ಅದೇ ರೀತಿ ಚನ್ನಬಸವಯ್ಯನು ಹುಲಸೂರಿಗೆ ಬರುವಷ್ಟರಲ್ಲಿ ಆನೆಯ ಪ್ರಾಣ ಹಾರಿ ಹೋಗಿತ್ತು. ಇದಕ್ಕೆ ಊರಿನ ಜನರು ವೈಭವದಿಂದ ಸಮಾಧಿ ಮಾಡಿದರು. ಈ ಪವಾಡದಿಂದ ತಿಳಿಯುವುದೇನೆಂದರೆ 'ಆಸೆಯೇ ದುಃಖಕ್ಕೆ ಮೂಲ'. ಶಿವಭಕ್ತರಿಗೆ ಆಸೆ ಇರಬಾರದು ಎಂಬ ಮಾತನ್ನು ಲೇಖಕರು ಹೇಳಿದ್ದಾರೆ.

ಶರಣರು ಮರಣವೇ ಮಹಾ ನವಮಿ ಎಂದು ನಂಬಿದ್ದರು. ಮರಣಕ್ಕೆ ಮತ್ತು ಸಮಾಧಿಗೆ ಅಂತರವಿದೆ. ಮರಣವು ಸ್ವಇಚ್ಛೆಯಿಂದ ಬಂದುದಲ್ಲ. ಆದರೆ ಸಮಾಧಿಯೂ ಸ್ವಇಚ್ಛೆಯಿಂದ ಬಂದುದು ಎಂಬ ಮಾತನ್ನು ಶ್ರೀ ಪಂಚಾಕ್ಷರಿಯವರು ಸಮಾಧಿ ಮತ್ತು ಮರಣದ ಬಗ್ಗೆ ಮಾರ್ಮಿಕವಾಗಿ ತಿಳಿಸಿದ್ದಾರೆ. ಬಾಯವ್ವನವರಿಗೆ ಆನೆಯ ಸಾವಿನಿಂದ ಮನ ನೊಂದಿತ್ತು. ಆಗ ಅವಳಿಗೆ ನೂರು ವರ್ಷ. ಬಾಯವ್ವಳು ತಾನು ಜೀವಂತ ಸಮಾಧಿ ತೆಗೆದುಕೊಳ್ಳುವುದಾಗಿ ತಿಳಿಸಿದ್ದರು. ಅವರಿಗಾಗಿ ಗದ್ದುಗೆ ನಿರ್ಮಾಣವಾಯಿತು. ಅದರಲ್ಲಿ ಬಾಯವ್ವ ಕುಳಿತು ಶಿವನಲ್ಲಿ ಒಂದಾದರು. ಅವರು ಹುಟ್ಟಿದ್ದು ೧೭೯೭ ವೈಶಾಖ ಶುದ್ಧ ಹುಣ್ಣಿಯ ದಿನದಿಂದು. ಸಮಾಧಿಯಾದದ್ದು ೧೮೯೭ರ ವೈಶಾಖ ಶುದ್ಧ ಪೂರ್ಣಿಮೆಯ ದಿನ. ಅಂದರೆ ಸತ್ಪುರುಷರು ತಮ್ಮ ಸಮಾಧಿಯನ್ನು ಇಚ್ಛೆಯ ಮೇರೆಗೆ ತೆಗೆದುಕೊಳ್ಳುವರು ಎಂಬುದನ್ನು ತಿಳಿಸಿದ್ದಾರೆ.

ಸಮಾಧಿ ಹೊಂದಿದವರ ಆತ್ಮವು ಜಾಗೃತವಾಗಿರುತ್ತದೆ ಎಂದು ಹೇಳಿದ್ದಾರೆ. ಬೀದರ ಜಿಲ್ಲೆಯಲ್ಲಿ ಬಹಳಷ್ಟು ಜನ ಜೀವಂತ ಸಮಾಧಿ ತೆಗೆದುಕೊಂಡಿದ್ದನ್ನು ಇಲ್ಲಿ ಸ್ಮರಿಸಬಹುದು. ಅವರಲ್ಲಿ ಪ್ರಮುಖರೆಂದರೆ ಮಾಣಿಕಪ್ರಭು ಮಹಾರಾಜರು, ಬಸವತೀರ್ಥದ ರುದ್ರಮುನಿ ಸ್ವಾಮಿ, ಹುಲಕುಂಠಿಯ ಅಡವಿಸ್ವಾಮಿ ಮುಂತಾದವರು ಜೀವಂತ ಸಮಾಧಿ ತೆಗೆದುಕೊಂಡಿದ್ದಾರೆ.

ಹೀಗೆ ಈ ಚರಿತ್ರೆಯಿಂದ ಶರಣರ ತತ್ವಗಳ ದರ್ಶನವನ್ನು ಲೇಖಕರು ಮಾಡಿಕೊಟ್ಟಿದ್ದಾರೆ.

**ಡಾ. ಚನ್ನಬಸವ ಪಟ್ಟದ್ದೇವರ ಹೋರಾಟದ ಬದುಕು :**

ಕನ್ನಡ ಸಾಹಿತ್ಯದಲ್ಲಿ ಹನ್ನೆರಡನೆಯ ಶತಮಾನವು ಸುವರ್ಣಯುಗ. ಅಂದಿನ ಹಲವಾರು ಶಿವಶರಣರು ಇದೇ ಬೀದರ ಜಿಲ್ಲೆಯ ಬಸವಕಲ್ಯಾಣದಲ್ಲಿ ತಮ್ಮ ಕಾರ್ಯವನ್ನು ಕೇಂದ್ರಿಕೃತವನ್ನಾಗಿ ಮಾಡಿಕೊಂಡು ತಮ್ಮ ವೈಚಾರಿಕ ಪ್ರಜ್ಞೆಯಿಂದ ಅದ್ಭುತ ಕಾರ್ಯವನ್ನೆಸಗಿ ಸಮಾಜದ ಗುರಿಯನ್ನೆ ಬದಲಿಸಿದರು. ಅಂದು ಸಮಾಜದಲ್ಲಿ ಬೇರು ಬಿಟ್ಟಿದ ಅಜ್ಞಾನ, ಅಸಮಾನತೆ, ಅಂಧಕಾರ, ಮೂಢನಂಬಿಕೆ, ಹಳೆಯ ಸಂಪ್ರದಾಯಗಳನ್ನು ಹೊಡೆದೊಡಿಸಿ ಸುಜ್ಞಾನ ಎಂಬ ಸೂರ್ಯಕಿರಣಗಳನ್ನು ಬೀರಿದರು. ಅದೇರೀತಿ ಇಪ್ಪತ್ತನೇ ಶತಮಾನದಲ್ಲಿ ಬೇರು ಬಿಟ್ಟಂತಹ ಹಲವಾರು ಸಾಮಾಜಿಕ, ಆರ್ಥಿಕ , ಶೈಕ್ಷಣಿಕ ಇತ್ಯಾದಿ ಸಮಸ್ಯೆಗಳನ್ನು ಹೊಡೆದೋಡಿಸಿದ ಮಹಾನುಭಾವರಲ್ಲಿ ಡಾ. ಚನ್ನಬಸವ ಪಟ್ಟದ್ದೇವರೊಬ್ಬರು. ಅದರಲ್ಲಿ ವಿಶೇಷವಾಗಿ ಅಳಿವಿನ ಅಂಚಿನಲ್ಲಿದ್ದ ಕನ್ನಡವನ್ನುಳಿಸಿ ಬೆಳೆಸಿದಂತ ಡಾ. ಚನ್ನಬಸವ ಪಟ್ಟದೇವರನ್ನು ಕುರಿತು ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಒಂದು ಚರಿತ್ರೆ ರಚಿಸಿದ್ದಾರೆ. ಆ ಚರಿತ್ರೆಯೇ 'ಡಾ.ಚನ್ನಬಸವ ಪಟ್ಟದೇವರ ಹೋರಾಟದ ಬದುಕು' ಇದು ೨೦೦೨ ರಲ್ಲಿ ಪ್ರಕಟಗೊಂಡಿದೆ.

ಬೀದರ ಜಿಲ್ಲೆಯ ಕನ್ನಡ ಮಾಧ್ಯಮದ ಶಾಲೆಗಳು ಈ ಶತಮಾನದ ಮೂರನೇ ದಶಕದವರೆಗೆ ಇರಲಿಲ್ಲ. ಮುಂದೆ ಮೂರು ದಶಕಗಳ ನಂತರ ಈ ಜಿಲ್ಲೆಯಲ್ಲಿ ಆಧುನಿಕ ಕನ್ನಡ ಸಾಹಿತ್ಯ ಕೃಷಿ ಪ್ರಾರಂಭವಾಯಿತು. ಅಂತಹ ಸಾಹಿತ್ಯ ಕೃಷಿ ಮಾಡುವವರ ಅನೇಕ ಲೇಖಕರಲ್ಲಿ ಶ್ರೀ ಪಂಚಾಕ್ಷರಿಯವರು ಒಬ್ಬರು. ಇವರು ಬಸವಾಭಿಮಾನಿಗಳು ಸಾಹಿತಿಗಳು, ಆದ ಇವರು ಸಹಜವಾಗಿಯೇ ಇಂತಹ ಅದ್ಭುತ ಕಾರ್ಯಕ್ಕೆ ಕೈಹಾಕಿದರು. ಸಕಲ ಜೀವಾತ್ಮರಿಗೆ ಲೇಸನ್ನೆ ಬಯಸುವ ಎಲ್ಲಾ ಶರಣರು ಆ ಶರಣರ ಆದರ್ಶಗಳೇ ಇವರಿಗೆ ದಾರಿದೀಪವಾಗಿವೆ. ಇದರ ಫಲವಾಗಿಯೇ ಡಾ. ಚನ್ನಬಸವ ಪಟ್ಟದ್ದೇವರ ಹೋರಾಟದ ಬದುಕು ಎಂದು ಈ ಕೃತಿಗೆ ಕೊಟ್ಟ ಶೀರ್ಷಿಕೆ ಔಚಿತ್ಯಪೂರ್ಣವಾಗಿದೆ.

"ಈ ಕೃತಿಯ ಪ್ರತಿಯೊಂದು ಅಧ್ಯಾಯವು ಶರಣರ ವಚನದೊಂದಿಗೆ ಪ್ರಾರಂಭವಾಗಿ ಆ ಅಧ್ಯಯನದ ಸಾರವನ್ನ ಬಿಂಬಿಸುವ ರೀತಿ ಒಂದು ಹೊಸ ಸಾಹಿತ್ಯ ಶೈಲಿಯಾಗಿದೆ."[೧] ಎಂದು ಡಾ.ಜಿ.ಕೃಷ್ಣಪ್ಪನವರು ಹೇಳಿದ್ದಾರೆ. ವಚನ ವಾಙ್ಮಯದಲ್ಲಿ ಅವರವರ ಭಾವಕ್ಕೆ , ಅವರವರ ಭಕ್ತಿಗೆ, ಅವರವರ ದರ್ಶನಕ್ಕೆ ಕಂಡಂತೆ ಭಾಲ್ಕಿಯ ಚನ್ನಬಸವ ಪಟ್ಟದೇವರು ಹಳ್ಳಿಯ ಜನರಿಗೆ ಭಕ್ತಿಯ ಮಾರ್ಗವನ್ನು ಕಂಡರಿಸಿದ್ದಾರೆ. ಸೇವೆಗಳಲ್ಲಿ ನಾನಾ ಬಗೆಗಳಿರುತ್ತವೆ. ವ್ಯಕ್ತಿ ವ್ಯಕ್ತಿಗೆ ಸಲ್ಲಿಸುವ ಸೇವೆ ಒಂದು ಬಗೆಯಾಗಿದೆ, ವ್ಯಕ್ತಿ ಸಮುದಾಯಕ್ಕೆ ಸಲ್ಲಿಸುವ ಸೇವೆ ಇನ್ನೊಂದು ಬಗೆಯಾದದ್ದು. ಒಂದರ ಫಲ ಸೀಮಿತ, ಇನ್ನೊಂದರ ಫಲ ಅಪರಿಮಿತ. ಮೊದಲನೆಯದು ಹೊಟ್ಟೆಯ ಪಾಡಿಗೆ ಮಾಡುವ ಸೇವೆ ಆದರೆ ಎರಡನೆಯದು ಪ್ರಜೆಗಳಿಂದ ಪ್ರಜೆಗಳಿಗಾಗಿ ಪ್ರಜೆಗಳಿಗೋಸ್ಕರ ಎನ್ನುವ ತತ್ವದಂತೆ ಯಾವ ಸ್ಪಷ್ಟ ಪ್ರತಿಫಲದ ಅಪೇಕ್ಷೆಯು ಇಲ್ಲದೆ ಮಾಡುವ ಸೇವೆ ಎರಡನೆಯದು. ಇಂತಹ ಸೇವೆ ಮಾಡಿದವರಲ್ಲಿ ಡಾ. ಚನ್ನಬಸವ ಪಟ್ಟದೇವರು ಒಬ್ಬರು. ಇವರ ಚರಿತ್ರೆ ಬರೆಯುವುದು ಸುಲಭವೇನಲ್ಲ.

---

೧) ಡಾ. ಚನ್ನಬಸವ ಪಟ್ಟದ್ದೇವರ ಹೊರಾಟದ ಬದುಕು.ಮುನ್ನುಡಿ.

ಭಕ್ತಿ ಎಂಬ ಪೃಥ್ವಿಯ ಮೇಲೆ; ಗುರುವೆಂಬ ಬೀಜವ ಅಂಕುರಿಸಿ
ಲಿಂಗ ಎಂಬ ಎಲೆಯಾಯಿತು, ವಿಚಾರವೆಂಬ ಹೂವಾಯಿತು,
ಆಚಾರ ಎಂಬ ಕಾಯಿ ಆಯಿತು, ನಿಷ್ಪತ್ತಿ ಎಂಬ ಹಣ್ಣಾಯಿತು,
ನಿಷ್ಪತ್ತಿ ಎಂಬ ಹಣ್ಣು ತಾನು ತೊಟ್ಟು ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

-ಬಸವಣ್ಣನವರು

ಬಸವಣ್ಣನವರ ವಾಣಿಯಂತೆ ಈ ಭಾಗದಲ್ಲಿ ಒಬ್ಬ ಮಹಾತ್ಮರ ಅವಶ್ಯಕತೆಯಿತ್ತು. ಅಂತಹ ಸಂದರ್ಭದಲ್ಲಿ ಡಾ. ಚನ್ನಬಸವ ಪಟ್ಟದ್ದೇವರು ಅರಮನೆಯಲ್ಲಿ ಜನಿಸಲಿಲ್ಲ. ಗುರುಮನೆಯಲ್ಲಿ ಅವತರಿಸಲಿಲ್ಲ ಸಾಮಾನ್ಯ ಬಡವರ ಮನೆಯಲ್ಲಿ ೨೨ನೇ ಡಿಸೆಂಬರ್ ೧೮೯೦ ರಲ್ಲಿ ತಂದೆ ರಾಚಪ್ಪಾ ತಾಯಿ ಸಂಗಮ್ಮನ ಉದರಲ್ಲಿ ಜನ್ಮ ತಾಳಿದರು. ಇವರ ಮನೆತನದ ಹೆಸರು ಬುಳ್ಳಾ. ಹುಟ್ಟಿದ ಮಗನ ಹೆಸರನ್ನು ಮಹಾರುದ್ರಪ್ಪನೆಂದು ನಾಮಕರಣ ಮಾಡಿದರು. ಇಂತಹ ಮಹಾರುದ್ರನ ಸ್ಥಿತಿ ಬೆಳೆಯುವ ಸಿರಿ ಮೊಳಕೆಯಲ್ಲಿದ್ದಂತೆ ಐದು ವರ್ಷದವರು ಇರುವಾಗಲೆ ತಂದೆ ತಾಯಿಯರನ್ನು ಕಳೆದುಕೊಂಡರು. ಇಂತಹ ಬಾಲಕನೇ ಈ ಭಾಗದ ಮಹಾತ್ಮರಾಗಿ ಹೊರಹೊಮ್ಮಿ ಬಸವಣ್ಣನಂತೆ ಈ ಭಾಗದಲ್ಲಿ ಜ್ಯೋತಿಯನ್ನು ಬೆಳಗಿಸಿದ್ದಾರೆ. ಇಂತಹವರ ಬಗ್ಗೆ ಈ ಸಂಕ್ಷಿಪ್ತ ಕೃತಿಯಲ್ಲಿ ಇವರು ಮಾಡಿರುವ ಕಾರ್ಯ, ನಿರೂಪಿಸಿರುವುದು ನಿಜಕ್ಕೂ ಶ್ಲಾಘನೀಯವಾದದ್ದು. ಕಿರಿದರಲ್ಲೇ ಹಿರಿದಾರ್ಥವನ್ನು ತುಂಬಿಕೊಟ್ಟಿರುವ ಲೇಖಕರು ಡಾ.ಚನ್ನಬಸವ ಪಟ್ಟದೇವರವರ ಚರಿತ್ರೆಗೆ ಸಂಬಂಧ ಪಟ್ಟ ಹಲವಾರು ವಿಷಯಗಳನ್ನು ಸುಂದರವಾದ ಭಾಷೆಯಲ್ಲಿ ಕಟ್ಟಿಕೊಟ್ಟಿದ್ದಾರೆ. "ಸಾಲು ಸಾಲುಗಳಲ್ಲಿ ಅಪ್ಪಗಳ ದಿವ್ಯದರ್ಶನ ನಮಗೆ ಮಾಡಿಸಿದ್ದಾರೆ. ಈ ಗ್ರಂಥದ ದಿವ್ಯ ದರ್ಶನವೇನೆಂದರೆ ಇನ್ನೊಂದರ್ಥದಲ್ಲಿ ಬಸವ ತತ್ವದ ದರ್ಶನ ಎಂದು ತಿಳಿಯಲು ಮರೆಯಬಾರದು"[೧] ಕೃತಿಯನ್ನ ಓದಲು ಪ್ರಯಾಸ ಪಡಬೇಕಾಗಿಲ್ಲ. ಕವಿ ಮಹಾಲಿಂಗ ರಂಗರವರ ಮಾತನ್ನು ನೆನಪಿಸಿಕೊಳ್ಳುವಂತಹದ್ದು.

ಸುಲಿದ ಬಾಳೆಯ ಹಣ್ಣಿನಂತೆ
ಸಿಗುರು ತೆಗೆದ ಕಬ್ಬಿನಂತೆ
ಉಷ್ಣ ಅಳಿದ ಹಾಲಿನಂತೆ,

ಯಾವ ಅಧ್ಯಾಯವನ್ನು ಓದಿದ್ದರು ಸುಲಭವು ರುಚಿಯುಳ್ಳದ್ದು ಆಗಿದೆ.

ಯಾವ ಪ್ರತಿಫಲದ ಅಪೇಕ್ಷೆಯು ಇಲ್ಲದೆ ಡಾ. ಚನ್ನಬಸವ ಪಟ್ಟದ್ದೇವರು ಮಾಡಿದ ಧರ್ಮ ಪ್ರಚಾರ, ಸಮಾಜ ಸೇವೆ, ಜೀವನದುದ್ದಕ್ಕೂ ಪಟ್ಟ ಪಾಡು. ಕನ್ನಡ ಶಾಲೆಗಳು ಆರಂಭಿಸಿದ ರೀತಿ. ಈ ಕೃತಿಯಲ್ಲಿ ಚನ್ನಾಗಿ ಮೂಡಿ ಬಂದಿದೆ. ಅವರು ಮಾಡಿರುವಂತಹ ಸಮಾಜ ಸೇವೆಯಲ್ಲಿ ಪಟ್ಟ ಕಷ್ಟಗಳು ನೂರಾರು. ಅಂತಹ ಸಾಮಾಜಿಕ ಸಮಸ್ಯೆಗಳಲ್ಲಿ ಮನುಷ್ಯನಿಗೆ ಅವಶ್ಯವಾಗಿರುವ ನೀರು, ಗಾಳಿ ಆಹಾರಗಳಲ್ಲಿ ಅಂದು ನೀರಿನ ಅಭಾವವಿತ್ತು. ಅಂತಹ ಸಂದರ್ಭದಲ್ಲಿ ಜನರ ಉಳಿವಿಗಾಗಿ ಸ್ವತಃ ತಾವೇ ಅಳವಾದ

---

೧) ಡಾ. ಚನ್ನಬಸವ ಪಟ್ಟದ್ದೇವರ ಹೋರಾಟದ ಬದುಕು. ಆಶೀರ್ವಾದ.

ಬಾವಿಯನ್ನು ತೋಡಿಸಿ, ಬಾವಿಯಲ್ಲಿನ ಹೂಳೆತ್ತಿ ನೀರಿನ ವ್ಯವಸ್ಥೆ ಮಾಡಿದ್ದು ನಿಜಕ್ಕೂ ಅವರು ಮಾಡಿದ ಸೇವೆ ಅಮೋಘವಾದದ್ದು

ಅಂದು ನಿಜಾಮರ ಆಳ್ವಿಕೆಗೆ ಒಳಪಟ್ಟ ಈ ಪ್ರದೇಶವು ಶೈಕ್ಷಣಿಕವಾಗಿ ಹಿಂದುಳಿದಿತ್ತು. ಜನರ ಜೀವನಕ್ಕೆ ಅವಶ್ಯಕವಾಗಿರುವ ಶಿಕ್ಷಣವನ್ನು ಕೊಡಿಸುವುದಕ್ಕಾಗಿ ಪಟ್ಟ ಹೋರಾಟ ನಮ್ಮ ಅರಿವಿಗೆ ಬರುತ್ತದೆ. ಶಿಕ್ಷಣದ ಅಗತ್ಯವನ್ನು ಪೂರೈಸುವ ಅಂತರಂಗದ ಕಾಳಜಿ ಅವರಲ್ಲಿತ್ತು. ಶಾಲೆಗಾಗಿ ಕಟ್ಟಡ ನಿರ್ಮಾಣ ನಡೆದಾಗ ಕೆಸರು ತುಳಿದು ಗೋಡೆಕಟ್ಟಿದ್ದು, ಮಠದ ಹೊಲದಲ್ಲಿ ಉತ್ತಿ ಜಿತ್ತಿ ರಾಶಿ ಮಾಡಿ ವಿದ್ಯಾರ್ಥಿಗಳಿಗೆ ಪ್ರಸಾದ ಒದಗಿಸಿದ್ದು, ಬಡಮಕ್ಕಳ ವಿದ್ಯಾಭ್ಯಾಸಕ್ಕಾಗಿ ಊರೂರು ತಿರುಗಿ ಪ್ರಸಾದ ನಿಲಯಕ್ಕಾಗಿ ಕಾಳು-ಕಡಿ ಸಂಗ್ರಹಿಸಿದ್ದು, ಶಾಲೆಗಳನ್ನು ತೆರೆದು ಶೈಕ್ಷಣಿಕವಾಗಿ ಕ್ರಾಂತಿ ಮಾಡಿದ್ದರು. ಇದರ ಫಲವಾಗಿ ಪ್ರಾಥಮಿಕ ಶಾಲೆಯಿಂದ ಹಿಡಿದು ಇಂಜಿನಿಯರಿಂಗ ಕಾಲೇಜು ವರೆಗೆ ಅವರು ಸ್ಥಾಪಿಸಿದ ಶಿಕ್ಷಣ ಸಂಸ್ಥೆ ಹೆಮ್ಮರವಾಗಿ ಬೆಳೆದು ನಿಂತಿರುವುದು ವಿಶೇಷವಾಗಿ ಕಂಡು ಬರುತ್ತದೆ. ಈ ವಿಶೇಷತೆಗೆ ಪೂರಕವಾಗಿ ಸೋಲಾಪುರದ ವಾರದ ಬಾಬಾ ಸಾಹೇಬರ ಆಶ್ರಯ ಪಡೆದ ಸಂಗತಿ ಅವಿಸ್ಮರಣೀಯವಾದದ್ದು. ಇದರಿಂದ ಡಾ. ಚನ್ನಬಸವ ಪಟ್ಟದೇವರು ಕಾಯಕ ಜೀವಿ ಎಂಬುದನ್ನು ಮೇಲಿನ ಘಟನೆಗಳ ಮೂಲಕ ಲೇಖಕರು ಹೃದಯಂಗಮವಾಗಿ ಉಣ ಬಡಿಸಿದ್ದಾರೆ.

ಡಾ. ಚನ್ನಬಸವ ಪಟ್ಟದೇವರು ಶ್ರಮ ಜೀವಿಗಳಾದುದನ್ನುಕಂಡು "ಕತ್ತಲೆಯ ಪಾಳಯದ ರವಿಯ ಹೊಕ್ಕಂತಾಯ್ತು ನಡೆ - ನುಡಿಯೊಂದಾದ ಅವರ ಕ್ರೀಯಾಶೀಲ ಬದುಕಿನಿಂದಾಗಿ ಪಡದಪ್ಪ ಪಟ್ಟದ್ದೇವರು ಶಬ್ದಗಳು ಘನತೆಯನ್ನ ಪಡೆದವು. 'ಗಗನಂ ಗಗನಾಕಾರಂ' ಮುಗಿಲಿಗೆ ಮುಗಿಲೇ ಸಾಟಿ ಎನ್ನುವಂತೆ ಲಿಂ.ಡಾ. ಭಾಲ್ಕಿ ಪಟ್ಟದೇವರ ವ್ಯಕ್ತಿತ್ವಕ್ಕೆ ಸರಿದೂಗುವಂತಹ ವ್ಯಕ್ತಿತ್ವ ಅಂದೂ ಇಲ್ಲ ಇಂದೂ ಇಲ್ಲ." ೧ ಎಂದು ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳು ಹೇಳಿದ್ದಾರೆ. ಇಂತಹ ಮಹಾ ಚೇತನರು ಈ ಶತಮಾನದಲ್ಲಿ ನಮ್ಮೆಲ್ಲರ ನಡುವೆ ಆಗಿ ಹೋಗಿದ್ದಾರೆಂದರೆ ಅಚ್ಚರಿ ಪಡಬೇಕಾಗುತ್ತದೆ.

ಸಾರ ಸಜ್ಜನರ ಸಂಗ ಲೇಸು ಕಂಡಯ್ಯ
ದೂರ ದುರ್ಜನರ ಸಂಗ ಭಂಗನಯ್ಯಾ
ಸಂಗವೆರಡುಂಟು, ಒಂದು ಬಿಡು ಒಂದು ಹಿಡಿ,
ಮಂಗಳ ಮೂರ್ತಿ ನಮ್ಮ ಕೂಡಲಸಂಗಮದೇವ.

-ಬಸವಣ್ಣನವರು

ಎಂಬ ಅಣ್ಣನ ವಾಣಿಯಂತೆ ಎಲ್ಲಾ ಕಾಲಗಳಲ್ಲಿಯೂ ದುಷ್ಟರು ಇರುತ್ತಾರೆ. ಶಿಷ್ಟರು ಇರುತ್ತಾರೆ ಇದು ಸಂಗಗಳಿಂದ. ದುಷ್ಟರನ್ನು ಶಿಷ್ಟ ರಕ್ಷಕರನ್ನಾಗಿ ಮಾಡುವುದು ಭಗವಂತನ ಕಾರ್ಯ. ಇಂತಹ ಒಂದೆರಡು ಘಟನೆಗಳನ್ನ ಇಲ್ಲಿ ಉಲ್ಲೇಖಿಸಬಹುದು. ಮೊರ್ಗಿಯಲ್ಲಿ ಕನ್ನಡ ಶಾಲೆ ಪ್ರಾರಂಭಿಸಬೇಕೆಂಬ ಅಪ್ಪನವರ ಆಶೆ ಆಕಾಂಕ್ಷೆಗಳಿಗೆ ತಣ್ಣೀರು ಎರಚಿದ ಯರನಳ್ಳಿಯ ಮಾರುತಿರಾವ ಕುಲಕರ್ಣಿ ಮತ್ತು ತಮ್ಮ ಮನೆಗೆ ನಾಮಕರಣ ಸಮಾರಂಭಕ್ಕೆ ಬರಬೇಕೆಂದು ಕೇಳಿ ಕೊಂಡಾಗ ಸ್ವಾಮಿಗಳು ಒಪ್ಪದಿದ್ದಾಗ

---

೧) ಡಾ. ಚನ್ನಬಸವ ಪಟ್ಟದ್ದೇವರ ಹೊರಾಟದ ಬದುಕು.ಬೆನ್ನುಡಿ.

ಅನುಚಿತವಾಗಿ ವರ್ತಿಸಿದ ಗೊಂದಗೈಯ ಹಣಮಂತರಾವ ಬಿರಾದರ ಇವರಿಬ್ಬರ ಸಂದರ್ಭಗಳಲ್ಲಿ ಸೃಷ್ಟಿಸಿಕೊಂಡಿರುವಂತಹ ವಿಚಾರಗಳನ್ನು ಲೇಖಕರು ಮನದಾಳಕ್ಕೆ ಇಳಿಯುವಂತೆ ಚಿತ್ರಿಸಿದ್ದಾರೆ.

ಸಜ್ಜನರ ಸಂಗ ಹೆಜ್ಜೇನು ಸವಿದಂತೆ
ದುರ್ಜನರ ಸಂಗವು ಬಚ್ಚಲ ರೊಚ್ಚಿ
ನಂತಿಹುದ್ದು ಸರ್ವಜ್ಞ

ಎಂಬ ಸರ್ವಜ್ಞನ ವಾಣಿಯಂತೆ ವ್ಯಕ್ತಿಯು ಒಬ್ಬ ಮಹಾನ ವ್ಯಕ್ತಿಯನ್ನಾಗಿ ರೂಪಿಸುವುದರಲ್ಲಿ ಸಜ್ಜನರ ಸಂಗವು ಬಹುಮುಖ್ಯವಾದುದು. ಅಂತಹ ಸಜ್ಜನರ, ಮಹಾತ್ಮರ ಸಂಗದಿಂದ ಇಂತಹ ಮಹಾತ್ಮರಾಗಲು ಸಾಧ್ಯವಾಯಿತು. ಅಂತಹವರಲ್ಲಿ ಚರಮೂರ್ತಿ ಶಿವಲಿಂಗಪ್ಪನವರು, ಹಾನಗಲ್ ಕುಮಾರಸ್ವಾಮಿಗಳು, ರಾಯಕಾಶಿರಾಯರು ಮುಂತಾದ ಮಹಾತ್ಮರನ್ನ ಈ ಕೃತಿಯಲ್ಲಿ ಲೇಖಕರು ಸ್ಮರಿಸಿದ್ದಾರೆ.

ಲೇಖಕರು ಕಮಲನಗರದ ಜನರ ಬಗ್ಗೆ ಹೇಳುವಾಗ ಅಲ್ಲಿಯ ಜನರು ಧೃಢ ಕಾಯಕ ಪರಿಶ್ರಮಿಗಳಾಗಿದ್ದಾರೆ. ಹೋರಾಟದ ಮನೋಧರ್ಮದವರಾಗಿದ್ದಾರೆ. ಅತಿಥಿ ಸತ್ಕಾರ ಮಾಡುವುದರಲ್ಲಿ ಎತ್ತಿದ ಕೈ ಎಂಬ ಮಾತು ಬಹು ಅಭಿಮಾನದಿಂದ ನುಡಿದಿರುವ ಮಾತೆನಿಸುತ್ತದೆ. ಆದರೆ ಕಮಲನಗರ ಜನರ ಪೈಕಿ ಕೆಲವರು ಮಾತ್ರ ಇಂತಹ ಗುಣಗಳನ್ನ ಹೊಂದಿರಬಹುದು. ಆದರೆ ಎಲ್ಲರು ಇಂತಹ ಒಳ್ಳೆಯ ಜನರಾಗಿದ್ದಾರೆ ಎಂದು ಒಪ್ಪಿಕೊಳ್ಳುವುದು ಕಷ್ಟ.

ಯಾರೇ ಆಗಲಿ ಅನಾಹುತವಾದ ಮೇಲೆಯೇ ಎಚ್ಚೆತ್ತುಕೊಳ್ಳುವುದು ಈ ಸಮಾಜದ ರೂಢಿ. ಮರಿದೇವರ ಗುಡ್ಡದಲ್ಲಿ ಒಬ್ಬ ಜಂಗಮನು ಮಹಾ ಪ್ರಸಾದ ಮಾಡಬೇಕೆಂದು ಬಯಸಿದಾಗ ಅಲ್ಲಿನ ಮುಸಲ್ಮಾನರು ಈ ಪುಣ್ಯ ಕಾಯಕವನ್ನು ಮಾಡಲು ಬಿಡಲಿಲ್ಲ. ಇಂತಹ ಸತ್ಕಾರ್ಯ ತನ್ನಿಂದಾಗಲಿಲ್ಲ ಎಂದು ನೊಂದ ಆ ಜಂಗಮನು ಆತ್ಮ ಹತ್ಯೆ ಮಾಡಿಕೊಳ್ಳುತ್ತಾನೆ. ಇಂತಹ ಅನಾಹುತ ಸಂಭವಿಸಿದ ಮೇಲೆ ರಾಯ ಕಾಶಿರಾಯರು ನಿಜಾಮ ಸರಕಾರದಿಂದ ಖಾಂಡ ಮಾಡುವ ಪರವಾನಿಗೆ ತಂದ ಸಂದರ್ಭವನ್ನು ಇಲ್ಲಿ ನೆನೆಯಬಹುದು. ರಾಯ ಕಾಶಿರಾಯರ ಕಾರ್ಯ ಮೆಚ್ಚಬೇಕಾಗುತ್ತದೆ. ಮರಿದೇವರ ಗುಡ್ಡದಲ್ಲಿನ ಜಂಗಮರಂತಹ ಇತರ ಮಹಾಜಂಗಮರನ್ನು ಬದುಕಿಸಿದ ಕೀರ್ತಿ ಭಾಲ್ಕಿಯ ಡಾ. ಚನ್ನಬಸವ ಪಟ್ಟದೇವರು ಅವರಿಗೆ ಸಲ್ಲುತ್ತದೆ ಎಂಬುದನ್ನು ಲೇಖಕರು ಕೊಂಡಾಡಿದ್ದಾರೆ. ಅರೆ ಭಕ್ತರಾದವರ ನೆರೆ ಬೇಡ. ಹೊರೆ ಬೇಡ ಎಂಬ ವಾಣಿಯಂತೆ ವಿಶ್ವದ ಪ್ರಪ್ರಥಮ ಪಾರ್ಲಿಮೆಂಟು ಎಂದು ಹೆಸರು ಪಡೆದ ಹನ್ನೆರಡನೆಯ ಶತಮಾನದ ಅನುಭವ ಮಂಟಪ ಬಸವಕಲ್ಯಾಣದಲ್ಲಿತ್ತು. ವಚನ ಸಾಹಿತ್ಯದ ಆಧಾರದ ಮೇಲೆ ಅಂತಹದೆ ಅನುಭವ ಮಂಟಪಕ್ಕೆ ಇಪ್ಪತ್ತನೇ ಶತಮಾನದಲ್ಲಿ ೧೯೫೫ ರಲ್ಲಿ ಜಯಚಾಮರಾಜ ಒಡೆಯರು ಅಡಿಗಲ್ಲು ಸಮಾರಂಭ ಮಾಡಿದರು. ಹಣದ ಅಡಚಣೆಯಿಂದ ಕಟ್ಟಡ ಕಾರ್ಯ ಅರ್ಧಕ್ಕೆ ನಿಲ್ಲಿಸಿದರು. ನಿಂತಿರುವ ಕಾರ್ಯವನ್ನು ಕಂಡ ಜನರು ಚನ್ನಬಸವಪಟ್ಟದೇವರಿಗೆ ಅನುಭವ ಮಂಟಪ ಪೂರ್ಣಗೊಳಿಸುವಂತೆ ಬೇಡಿಕೊಂಡರು. ಇವರ ನಿಲುವನ್ನು ಅರಿತ ಅಪ್ಪಗಳು ಭಾಲ್ಕಿಯಿಂದ ಕಲ್ಯಾಣಕ್ಕೆ ಪಾದಯಾತ್ರೆ ಕೈಕೊಂಡು ಅನುಭವ ಮಂಟಪ ನಿರ್ಮಿಸುವ ಆಗಿನ ಅಪ್ಪ ಅವರ ಕಷ್ಟಗಳನ್ನು ಪಂಚಾಕ್ಷರಿಯವರು ಎಳೆ ಎಳೆಯಾಗಿ

ಬಿಚ್ಚಿಟ್ಟಿದ್ದಾರೆ. ಹೇಗೆ ನಿಂತಿರುವ ಕಾರ್ಯ ೧೯೭೨ ರಲ್ಲಿ ಪೂರ್ಣಗೊಳಿಸಿ ಅನುಭವ ಮಂಟಪದ ರೂವಾರಿಯಾಗಿರುವ ಡಾ. ಚನ್ನಬಸವ ಪಟ್ಟದೇವರನ್ನ ಕುರಿತು ಜಯದೇವಿ ತಾಯಿ ಲಿಗಾಡೆಯವರು ಕೊಂಡಾಡಿದ್ದಾರೆ. ಅದು-

"ಮಂಟಪದ ಕಾರ್ಯಕ್ಕೆ ಸೊಂಟಕಟ್ಟಿ ನಿಂತರು
ಕಟ್ಟಡಕ್ಕೆ ಕಲ್ಲು ಮಣ್ಣು ಹೊತ್ತರು, ಬಂದಂಥ
ನೂರು ಸಂಕಟಗಳಿಗೆ ಎದುರಿಸಿ
ಅನುಭವ ಮಂಟಪ ಮನ ತುಂಬಿ ನೋಡುತ
ತನ್ನ ತಾನೆ ಕಣ್ಣೀರು ಸುರಿದವು ಗುರುಗಳಿಗೆ
ಅನುಪಮ ಹರುಷವಾಯಿತು."[1]

- ಡಾ. ಜಯದೇವಿ ತಾಯಿ ಲಿಗಾಡೆ

ಈ ಕೃತಿಯ ಇನ್ನೊಂದು ವೈಶಿಷ್ಟ್ಯವೇನೆಂದರೆ ಹಲವಾರು ಶಿವಶರಣ, ಮಠಾಧೀಶರ, ಊರುಗಳ ಪರಿಚಯ ಮಾಡಿಕೊಟ್ಟಿರುವುದನ್ನು ಕಾಣುತ್ತೇವೆ. ಕಡೆಯಲ್ಲಿ ಇಂತಹ ಪರಿಚಯಗಳನ್ನು ಮಾಡಿಕೊಟ್ಟು ಅವಶ್ಯವಿಲ್ಲದ ಕಡೆ ಕೇವಲ ಹೆಸರನ್ನ ಹೇಳಿಕೊಂಡು ಹೋಗಿರುವುದು ಇಲ್ಲಿ ವೈಶಿಷ್ಟ್ಯ ಪೂರ್ಣವಾದದ್ದು. ಡಾ. ಚನ್ನಬಸವ ಪಟ್ಟದೇವರ ಜನನದಿಂದ ಹಿಡಿದು ಲಿಂಗೈಕ್ಯರಾಗುವುದರವರೆಗೆ ಅವರ ಹೋರಾಟದ ಬದುಕನ್ನು ಈ ಚರಿತ್ರೆಯಲ್ಲಿ ಸಂಕ್ಷಿಪ್ತವಾಗಿ ಕಿರಿಯದರಲ್ಲೆ ಹಿರಿಯಾರ್ಥವನ್ನು ನಿರೂಪಿಸಿ ಕೊಟ್ಟಿರುವುದು ನಿಜಕ್ಕೂ ಶ್ಲಾಘನೀಯವಾದದ್ದು.

**ಮಹಾದೇವಪ್ಪಾ ಮೀಸೆ :**

ಪಂಚಾಕ್ಷರಿ ಪುಣ್ಯಶೆಟ್ಟಿಯವರು ಮಹಾದೇವಪ್ಪಾ ಮೀಸೆ ಎಂಬುವರ ಜೀವನ ಚರಿತ್ರೆಯನ್ನು ಚೆನ್ನಾಗಿ ಬರೆದಿದ್ದಾರೆ. ಈ ಗ್ರಂಥವನ್ನು ಓದುತ್ತಾ ಹೋದಂತೆ ಮೈನವಿರೇಳುತ್ತದೆ. ಈ ಚರಿತ್ರೆ ಬರೆದು ಬೀದರ ಜನರಿಗೆ ಒಬ್ಬ ಆದರ್ಶ ಪುರುಷನ ಪರಿಚಯ ಮಾಡಿಕೊಟ್ಟಿದ್ದಾರೆ. ಇವರು ಈ ಚರಿತ್ರೆ ಬರೆಯದೆ ಇದ್ದರೆ ಆದರ್ಶ ಪುರುಷರ ಚರಿತ್ರೆಯು ಕಾಲ ಗರ್ಭದಲ್ಲಿ ಅಡಗಿ ಹೋಗುತ್ತಿತ್ತು. ಇದಲ್ಲದೆ ಈ ಪುಸ್ತಕದಲ್ಲಿ ಬೀದರದ ಐತಿಹಾಸಿಕ ಘಟನೆಗಳು ಕೂಡ ಚಿತ್ರಿಸಿದ್ದಾರೆ. ವೀರೇಂದ್ರ ಸಿಂಪಿಯವರು ಈ ಪುರುಷನ ಬಗ್ಗೆ ಹೀಗೆ ಬರೆಯುತ್ತಾರೆ. "ಮಹಾದೇವಪ್ಪಾ ಮೀಸೆಯವರು ಮಹಾನ ಶರಣರು ಶಿವನೇ ತನ್ನ ಗಣ ಒಬ್ಬರನ್ನು ಅವರ ರೂಪದಲ್ಲಿ ಕಳಿಸಿದನೋ ಎನ್ನುವಂತಿದ್ದರು. ಹೀಗಿದ್ದರೂ ಇಂದಿನ ಬೀದರಿನ ಜನರಿಗೆ ಸಂಪೂರ್ಣ ಅಪರಿಚಿತರು. ಅವರೊಬ್ಬರು ಕಾಡಿನ ಕುಸುಮವಿದ್ದಂತೆ"[2] ಎಂದು ಬಣ್ಣಿಸುತ್ತಾರೆ ಪೂಜ್ಯಶ್ರೀಬಸವಲಿಂಗ ಪಟ್ಟದ್ದೇವರು ಹೀಗೆ "ಸಮಾಜ ಸೇವೆ ಹೇಗೆ ಮಾಡಬೇಕೆಂಬುದನ್ನು ಕಲಿತುಕೊಳ್ಳಬೇಕಾದರೆ ಮೀಸೆಯವರ ಪವಿತ್ರ ಜೀವನವನ್ನು ಅವಲೋಕಿಸುವುದು ಅವಶ್ಯ"[3] ಎಂದು ಹೇಳುತ್ತಾರೆ. ನಿಜವಾಗಿಯು ಈ ಪುಸ್ತಕ

---

೧) ಡಾ. ಚನ್ನಬಸವ ಪಟ್ಟದ್ದೇವರ ಹೊರಾಟದ ಬದುಕು. ಪುಟ-೭೫

೨) ಮಹಾದೇವಪ್ಪಾ ಮೀಸೆ. ಬೆನ್ನುಡಿ.

೩) ಮಹಾದೇವಪ್ಪಾ ಮೀಸೆ. ಬೆನ್ನುಡಿ.

ಎಲ್ಲರೂ ಓದಬೇಕಾಗಿದೆ.

ಮೀಸೆಯವರ ವಂಶದವರು ಕಲ್ಯಾಣ ಪಟ್ಟಣದವರೆಂದು ತಿಳಿದುಬರುತ್ತದೆ. ಕಲ್ಯಾಣ ಕ್ರಾಂತಿಯಾದಾಗ ಅವರು ಭಾಲ್ಕಿ ತಾಲೂಕಿನ ಲಖಣಗಾಂವದಲ್ಲಿ ನೆಲೆಸಿದರು. ಶಿವಮೂರ್ತಿ ಪುಟ್ಟ ಅಂಗಡಿಯನ್ನಿಟ್ಟುಕೊಂಡು ಜೀವನ ಸಾಗಿಸುತ್ತಿದ್ದರು. ಶಿವಮೂರ್ತಿಯವರ ಧರ್ಮ ಪತ್ನಿ ಕಲ್ಯಾಣ ಈ ದಂಪತಿಗಳ ಮಗನೆ ಮಹಾದೇವಪ್ಪ ಮೀಸೆ. ಉದಗೀರನಲ್ಲಿ ಇವರ ಶಿಕ್ಷಣ ಸಾಗಿತ್ತು. ಮರಾಠಿ, ಮೋಡಿ, ಕಲಿತರು. ಲೆಕ್ಕ ಪತ್ರದಲ್ಲಿ ಚುರುಕು ಬುದ್ಧಿಯುಳ್ಳವಗಾಗಿದ್ದರು. ಉದಗೀರ ಪಟ್ಟಣವು ಇವರ ಮೇಲೆ ಬಹಳ ಪ್ರಭಾವ ಬೀರಿತು. ಕಾರಣವೇನೆಂದರೆ ಇಲ್ಲಿಗೆ ಹರ್ಡೆಂಕರ ಮಂಜಪ್ಪ ಭಾಲ್ಕಿಯ ಚನ್ನಬಸವ ಪಟ್ಟದೇವರು ನಾವದಗಿಯ ರೇವಪಯ್ಯನವರು ಮತ್ತು ಆರ್ಯ ಸಮಾಜದ ಮುಖಂಡರು ಬರುತ್ತಿದ್ದರು. ಇವರ ಸತ್ಸಂಗಗಳಿಂದ ಮೀಸೆಯವರು ಲಾಭ ಪಡೆದದ್ದನ್ನು ಲೇಖಕರು ವರ್ಣಿಸಿದ್ದಾರೆ.

ಇವರು ಹದಿಮೂರನೇ ವಯಸ್ಸಿನಿಂದಲೇ ತಾಯಿ ತಂದೆಗಳ ಮೇಲೆ ಭಾರ ಹಾಕದೆ ಮಾರವಾಡಿಯ ಅಂಗಡಿಯಲ್ಲಿ ಗುಮಾಸ್ತರಾಗಿದ್ದರು. ಇವರ ವಿವಾಹವು ಉದಗೀರ ತಾಲೂಕಿನ ದೇವಣಿ ಗೌಡರ ಮಗಳು ಸರಸ್ವತಿಬಾಯಿಯವರೊಡನೆ ಆದ ಸಂದರ್ಭವನ್ನು ಪುಣ್ಯಶೆಟ್ಟಿಯವರು ವಿವರವಾಗಿ ಬರೆದಿದ್ದಾರೆ.

ಮಾರವಾಡಿ ಅಂಗಡಿಯಲ್ಲಿಂದ ನೌಕರಿ ಬಿಟ್ಟು ಸರಕಾರದ ರೇಷನ ಅಂಗಡಿ ಪ್ರಾರಂಭಿಸಿದರು. ಇವರ ಪ್ರಾಮಾಣಿಕತನದಿಂದ ರೇಷನ್ ಅಂಗಡಿ ನಡೆಸುತ್ತಿರುವುದರ ಪರಿಣಾಮ ಸರಕಾರವು ಇವರಿಗೆ ಗೌರವಿಸಿತು. ಸದಾ ಪರೋಪಕಾರ ಜೀವಿಗಳಾದ ಇವರು ಭಾಲ್ಕಿ ಪಟ್ಟದ್ದೇವರಿಗೆ ಧನ ಸಂಗ್ರಹಿಸುವಲ್ಲಿ ಭಾಗವಹಿಸುತ್ತಿದ್ದರು. ಉದಗೀರನ ನಾಗರಿಕರಿಗೆ ನೀರಿನ ಅಭಾವವಿದ್ದಾಗ ಉದಗೀರಗೆ ನೀರು ತರುವಲ್ಲಿ ಪಟ್ಟ ಶ್ರಮವನ್ನು ಲೇಖಕರು 'ಭಗೀರಥನಿಗೆ' ಇವರನ್ನ ಹೋಲಿಸಿ ಬರೆದಿದ್ದಾರೆ. ದಿಲ್ಲಿಯವರೆಗೆ ಹೋಗಿ ಅನ್ನ ಸತ್ಯಾಗ್ರಹ ಮಾಡಿ ನೀರು ಸರಬರಾಜು ಮಾಡುವಂತೆ ಮಾಡಿದರು.

ಹೈದರಾಬಾದನಲ್ಲಿ ವೀರಶೈವ ಹಾಸ್ಟೇಲ್ ಕಟ್ಟುವಲ್ಲಿ ಬಸಪ್ಪ ಮಂಡಗೆಯವರಿಗೆ ಸಹಕರಿಸಿದ್ದು ಇದಕ್ಕಾಗಿ ಅವರು ಸ್ವತಃ ತಮ್ಮ ಮನೆಯನ್ನೆ ಮಾರಿದನ್ನು ಅವರ ಮಕ್ಕಳ ಮದುವೆಯನ್ನು ಸರಳ ರೀತಿಯಿಂದ ಮಾಡಿ, ವೈಭವದಿಂದ ಲಗ್ನ ಮಾಡುವವರಿಗೆ ಮಾದರಿಯಾದ ವಿಷಯವನ್ನು ಲೇಖಕರು ಈ ಚರಿತ್ರೆಯಲ್ಲಿ ವಿವರವಾಗಿ ವರ್ಣಿಸಿದ್ದಾರೆ.ವಿನೋಭಾ ಭಾವೆಯವರ ಪ್ರಭಾವ ಅವರ ಮೇಲೆ ಬೀರಿತ್ತು. ಅವರ ಹತ್ತಿರದವರಾಗಿ ಅವರ ವಿಶ್ವಾಸ ಗಳಿಸಿಕೊಂಡರು. ಕೆಲವು ವರ್ಷಗಳ ಕಾಲ 'ಭೂದಾನ' ಚಳುವಳಿಯಲ್ಲಿ ಅವರೊಡನೆ ಸಂಚರಿಸಿದ್ದಾಗ ಶಿವಶರಣರ ವಚನಗಳನ್ನ ಭಾವಾರ್ಥವನ್ನು ಹೇಳಿ ಶರಣರ ಪರಿಚಯ ಮಾಡಿಕೊಟ್ಟವರಾಗಿದ್ದಾರೆಂದು ಲೇಖಕರು ಬಣ್ಣಿಸಿದ್ದಾರೆ.

ವೀರಶೈವ ವಿದ್ಯಾವರ್ಧಕ ಹಾಸ್ಟೆಲಿನಂತೆ ಮೀಸೆಯವರು ಉಚಿತ ಪ್ರಸಾದ ನಿಲಯವನ್ನು ಉದಗೀರನ ಹತ್ತಿರವಿರುವ ಸೋಮನಾಥಪುರದಲ್ಲಿ ಪ್ರಾರಂಭಿಸಿದರು. ಈ ನಿಲಯದಲ್ಲಿ ಅಭ್ಯಾಸ ಮಾಡಿದ ಉದ್ಯೋಗಿಗಳು ಉನ್ನತ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವದನ್ನು ನೋಡಿದರೆ ಅವರು ಬಡವರ ಮೇಲೆ ಇಟ್ಟ ಕಾಳಜಿಯನ್ನು ತೋರಿಸುತ್ತದೆ.

ಭಾಲ್ಕಿಯ ಹಿರೇಮಠವು ಟ್ರಸ್ಟ್ ಮಾಡುವುದರಲ್ಲಿ ಮೀಸೆಯವರ ಶ್ರಮವು ಹೆಚ್ಚಿನದಾಗಿದೆ. ಟ್ರಸ್ಟ್ ಮಾಡಬಾರದೆಂದು ಜನರ ಇಚ್ಛೆಯಾಗಿತ್ತು, ಆದರೆ ಭಾಲ್ಕಿ ಪಟ್ಟದ್ದೇವರು ಮಾನ್ಯ ನಿಜಲಿಂಗಪ್ಪನವರಿಗೆ ಮಠವು ಟ್ರಸ್ಟ ಮಾಡುವೆನೆಂದು ವಚನ ಕೊಟ್ಟಿದ್ದರು. ಪಟ್ಟದ್ದೇವರ ಈ ಪ್ರತಿಜ್ಞೆಯನ್ನು ಮೀಸೆಯವರು ಪೂರೈಸಿದ್ದರು. ಇದಕ್ಕಾಗಿ ಅವರಿಗೆ ಬಂದ ಕಷ್ಟಗಳನ್ನು ದೀರ್ಘವಾಗಿ ಮನಸ್ಸು ಕರಗುವಂತೆ ಚರ್ಚಿಸಿದ್ದಾರೆ. ಹದಿನಾರನೇ ಅಖಿಲ ಭಾರತ ವೀರಶೈವ ಮಹಾಸಭೆ ೧೯೫೫ ರಲ್ಲಿ ಜರುಗಿದಾಗ ಮರಿದೇವರ ಗುಡ್ಡದ ಮೇಲೆ ಅನುಭವ ಮಂಟಪದ ಅಡಿಗಲ್ಲನ್ನು ಶ್ರೀ ಜಯಚಾಮರಾಜ ಒಡೆಯರ ರವರ ಅಮೃತ ಹಸ್ತದಿಂದ ಇಡಲಾಯಿತ್ತು. ಪೂಜ್ಯ ಬಂಥನಾಳ ಶಿವಯೋಗಿಗಳ ಆದೇಶದಂತೆ ಅನುಭವ ಮಂಟಪದ ಕಟ್ಟಡ ಕೆಲಸ ಪ್ರಾರಂಭಿಸಲು ದುಡಿಯತೊಡಗಿದ್ದು, ಆ ಸಂದರ್ಭದಲ್ಲಿ ಖ್ಯಾತ ವ್ಯಕ್ತಿಗಳು ಫ.ಗು.ಹಳಕಟ್ಟಿ, ಬಾಬಾಸಾಹೇಬ ವಾರದ, ಬಿ.ಡಿ.ಜತ್ತಿ ಶರಣಯ್ಯ ಸ್ವಾಮಿ ಮಹಾಗಾಂವ ಮುಂತಾದವರು ಇದ್ದರೆಂದು ಮೀಸೆಯವರು ತಮ್ಮ ಸಂದರ್ಶನದಲ್ಲಿ ಹೇಳಿದನ್ನು ವಿವರವಾಗಿ ಲೇಖಕರು ಬಣ್ಣಿಸಿದ್ದಾರೆ.

ಅನುಭವ ಮಂಟಪವು ಅರ್ಧಕ್ಕೆ ನಿಲ್ಲಿಸಿದ್ದರು. ಹಂಪಿಯಿಂದ ಬಸವಕಲ್ಯಾಣಕ್ಕೆ ಪಾದಯಾತ್ರೆ ಕೈಕೊಂಡಾಗ ಸಂಗ್ರಹಿಸಿದ ಹಣವು ಅನುಭವ ಮಂಟಪದ ಸಹಾಯಾರ್ಥವಾಗಿತ್ತು. ಆದರೆ ಈ ಹಣ ಬೇರೆ ಉದ್ದೇಶಕ್ಕಾಗಿ ಬಳಸಲಾಗಿತ್ತು. ಇದರ ವಿರುದ್ಧವಾಗಿ ಅನ್ನ ಸತ್ಯಾಗ್ರಹ ಹೂಡಿದ್ದನ್ನು ಮತ್ತು ಭಾಲ್ಕಿ ಪಟ್ಟದೇವರು ಅರ್ಧಕ್ಕೆ ನಿಂತ ಅನುಭವ ಮಂಟಪವನ್ನು ಬಹಳ ಶ್ರಮ ಪಟ್ಟು ಪೂರೈಸಿದ ಇವರ ಎಲ್ಲ ಕಾರ್ಯಗಳಿಗೆ ಮಹಾದೇವಪ್ಪಾ ಮೀಸೆಯವರು ಬಲಗೈಯಂತೆ ಕೆಲಸ ಮಾಡಿದನ್ನು ಲೇಖಕರು ತಿಳಿಸಿದ್ದಾರೆ.

ಇವರು ಜೀವಂತ ಸಮಾಧಿ ತೆಗೆದು ಕೊಳ್ಳಲು ನಿರ್ಧಾರ ಮಾಡಿದ್ದು ೧೯೭೨ ಜೂನ ೧೩ ರಂದು. ಆಹಾರವನ್ನು ತ್ಯಜಿಸಿ ಬಿಟ್ಟರು. ಇಪ್ಪತ್ತೊಂದು ದಿವಸ ಮಜ್ಜಿಗೆ ಮೇಲೆ ಉಳಿದರು. ಆನಂತರ ಇಪ್ಪತ್ತೊಂದು ದಿವಸ ನಿಂಬೆಯ ಪಾನಕ ಸೇವಿಸಿದರು. ಮತ್ತೆ ನಲವತ್ತು ದಿವಸ ನೀರು ಕುಡಿದು ದಿನಗಳೆದರು. ಪ್ರತಿನಿತ್ಯ ಸಾವಿರಾರು ಜನ ಲಖಣಗಾಂವದ ಚಕ್ರಕೋಟಿ ಬಾಯವ್ವಳ ಮಠಕ್ಕೆ ಜಾತ್ರೆಯೋಪಾದಿಯಲ್ಲಿ ಬರುತ್ತಿದ್ದರು. ಭಾಲ್ಕಿಯ ಚನ್ನಬಸವ ಪಟ್ಟದೇವರು ಸೋಲಾಪುರದ ಬಾಬಾಸಾಹೇಬರು ಬಂದು ಬೇಟಿಯಾಗಿ ಮಗುವಿನಂತೆ ಇವರನ್ನು ಅಪ್ಪಿಕೊಂಡ ಪ್ರಸಂಗವನ್ನು ಪುಣ್ಯಶೆಟ್ಟಿಯವರು ಕರುಣೆ ಉಕ್ಕುವಂತೆ ಚಿತ್ರಿಸಿದ್ದಾರೆ. ಇನ್ನು ಸಮಾಧಿ ತೆಗೆದುಕೊಳ್ಳಲು ಹತ್ತು ದಿವಸ ಇರುವಾಗ ಪೊಲೀಸರಿಗೆ ಇವರಿಗೆ ಬೇಡಾದವರು ದೂರುಕೊಟ್ಟು ಒತ್ತಾಯ ಪೂರ್ವಕ ಉಪವಾಸ ಬಿಡಿಸಿದ್ದನ್ನು ಊರಿನ ಜನ ಇದರ ವಿರೋಧವಾಗಿ ಹೋರಾಡಿದ ಸಂಗತಿಯನ್ನು ಬರೆದಿದ್ದಾರೆ.

ಬೀದರನಲ್ಲಿ ಸರ್ವೋದಯ ಕಟ್ಟಡ ಎದ್ದು ನಿಲ್ಲುವಂತೆ ಮೀಸೆಯವರು ಮಾಡಿದನ್ನು ಈ ಸರ್ವೋದಯ ಕಟ್ಟಡದ ಹತ್ತಾರ ಮಳಿಗೆಗಳಿವೆ ಎಂದು ಲೇಖಕರು ಹೇಳಿದ್ದಾರೆ. ಉಡತಡಿ ಗ್ರಾಮದ ಹೆಸರನ್ನ ಮಾಯವಾಗಿದ್ದನ್ನು ಇವರು ಅದರ ಇತಿಹಾಸವನ್ನ ಕೆದಕಿ ಗ್ರಾಮಕ್ಕೆ ನ್ಯಾಯ ಒದಗಿಸಿ ಕೊಟ್ಟಿದ್ದಾರೆಂದು ಮತ್ತು ಏಕಿಕರಣ ಹೋರಾಟದಲ್ಲೂ ಭಾಗಿಯಾದ ಪ್ರಸಂಗ, ಹಾಗೂ ರಜಾಕಾರರ ಊರು ಸುಡಲು ಬರುವಾಗ ಅನ್ನ ಸತ್ಯಾಗ್ರಹ ಮಾಡಿ ಗ್ರಾಮಕ್ಕೆ ಬರುವ ಆಪತ್ತನ್ನು ತಪ್ಪಿಸಿದ್ದು, ಮುಂತಾದ ವಿಷಯಗಳನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ.

**ಹುತಾತ್ಮ ಬಸವರಾಜ ಹುಡುಗಿ ಅಂದಿನ ಕಾಲಮಾನ :**

ಭಾರತವು ವಿಶಾಲವಾದ ದೇಶ, ಜನಸಂಖ್ಯೆಯಲ್ಲಿಯು ಮುಂದೆ, ಇಷ್ಟಿದ್ದರೂ ಕೂಡ ಈ ದೇಶವು ನೂರಾರು ವರ್ಷಗಳ ಕಾಲ ಗುಲಾಮಗಿರಿಯ ಬಂಧನದಲ್ಲಿ ಇದ್ದದ್ದು ಚಿಂತಿಸುವ ವಿಷಯವಾಗಿದೆ. ಚಿಕ್ಕದಾದಂತಹ ಬ್ರಿಟನ್ ದೇಶವು ಇಡಿ ಜಗತ್ತಿನ ಅರ್ಧ ಭಾಗವನ್ನು ಆಳಿತ್ತು. 'ಸೂರ್ಯ ಮುಳುಗದ ಸಾಮ್ರಾಜ್ಯ' ಎಂದು ಹೆಸರು ಪಡೆದಿತ್ತು. ಇದಕ್ಕೆ ಮುಖ್ಯ ಕಾರಣವೇನೆಂದರೆ ಅಲ್ಲಿಯ ಜನರ ಐಕ್ಯತೆ, ಹಾಗು ದೇಶಭಕ್ತಿಯೇ ಕಾರಣ ಎಂದು ಹೇಳಬೇಕು. ಆದರೆ ನಮ್ಮ ದೇಶದಲ್ಲಿ ಹೆಚ್ಚಿನ ಜನಸಂಖ್ಯೆಯಲ್ಲಿದ್ದರೂ ಜನರಲ್ಲಿ ಐಕ್ಯತೆ ಇಲ್ಲ. ಪರಸ್ಪರ ದ್ವೇಷಾಸೂಯೇ ಇದ್ದ ಕಾರಣ ಭಾರತೀಯರೇ ಈ ಪರಕೀಯರನ್ನು ಆಹ್ವಾನಿಸಿ ದೇಶವನ್ನು ಗುಲಾಮಗಿರಿಯನ್ನಾಗಿ ಮಾಡಲು ಕಾರಣರಾದರು. ಸುಮಾರು ಎಂಟು ನೂರು ವರ್ಷಗಳ ಕಾಲ ನಮ್ಮ ದೇಶವು ಪರಕೀಯರ ದಾಸ್ಯದಲ್ಲಿ ಬಳಲಿತ್ತು.ಇದು ನಾಚಿಕೆಗೇಡು, ಶತಮಾನಗಳ ಕಾಲ ಸ್ವಾತಂತ್ರ್ಯ ಹೋರಾಟದ ಫಲವಾಗಿ ಮತ್ತು ಬಲಿದಾನದಿಂದ ಈ ದೇಶ ಸ್ವಾತಂತ್ರವಾಯಿತು. ಗಾಂಧೀಜಿಯವರ ನೇತೃತ್ವದಲ್ಲಿ ಜನರು ಒಗ್ಗೂಡಿದರು. ೧೯೪೭ ಆಗಸ್ಟ ೧೫ ರಂದು ಸ್ವಾತಂತ್ರ್ಯವಾಯಿತು. ಆದರೆ ಹೈದ್ರಾಬಾದ ನಿಜಾಮನು ತಾನು ಸ್ವಾತಂತ್ರ್ಯನಾಗಿರುತ್ತೇನೆ. ಭಾರತದ ಒಕ್ಕೂಟದಲ್ಲಿ ಸೇರುವುದಿಲ್ಲ ಎಂದು ಹಠ ಹಿಡಿದನು. ಹೈದ್ರಾಬಾದ ರಾಜ್ಯ ಬಹುಸಂಖ್ಯಾತರಾದ ಶೇಕಡಾ ಎಂಭತ್ತರಷ್ಟು ಹಿಂದುಗಳ ಮೇಲೆ ರಜಾಕಾರರ ಅತ್ಯಚಾರ ಹೆಚ್ಚಾಯಿತು. ಸ್ವಾಮಿ ರಾಮಾನಂದ ತೀರ್ಥರ ನೇತೃತ್ವದಲ್ಲಿ ನಿಜಾಮನ ವಿರುದ್ಧ ಹೋರಾಡಿದ್ದಾರೆ.

ಶ್ರೀಪಂಚಾಕ್ಷರಿ ಪುಣ್ಯಶೆಟ್ಟಿಯವರು ೧೯೮೭ ರಲ್ಲಿ ರಚಿಸಿದ ಸ್ವಾತಂತ್ರ್ಯ ಹುತಾತ್ಮ ಬಸವರಾಜ ಹುಡಗಿ ಅವರ ಜೀವ ಚರಿತ್ರೆಯು ಅನೇಕ ಸಾಹಿತಿಗಳ ಸಲಹೆಯ ಮೇರೆಗೆ ಈ ಕೃತಿಯನ್ನು ವಿಸ್ತರಿಸಬೇಕೆಂದು ಅಂದಿನ ಕಾಲಮಾನದ ಅನೇಕ ಸಂಗತಿಗಳನ್ನು ಕಲೆ ಹಾಕಿ ಅವುಗಳು ಇವರ ಬದುಕಿಗೆ ಹೇಗೆ ಪೂರಕವಾಗಿವೆ ಎಂಬುದನ್ನು ಅರಿತು 'ಹುತಾತ್ಮ ಬಸವರಾಜ ಹುಡಗಿ ಅಂದಿನ ಕಾಲಮಾನ' ಎಂಬ ಕೃತಿಯನ್ನು ೨೦೦೭ ರಲ್ಲಿ ಪ್ರಕಟಿಸಿದ್ದಾರೆ.

ಬೀದರ ಜಿಲ್ಲೆಯ ಬಗದಲ ಗ್ರಾಮದ ಬಸವರಾಜ ಹುಡಗಿಯವರು ಹೈದ್ರಾಬಾದ ವಿಮೋಚನೆ ಹಾಗೂ ಭಾರತ ಸ್ವಾತಂತ್ರ್ಯ ಚಳುವಳಿಗಳಲ್ಲಿ ಮತ್ತು ಪೋರ್ಚುಗೀಸರ ಕಪಿಮುಷ್ಟಿಯಿಂದ ಗೋವಾ ವಿಮೋಚನೆ ಗೊಳಿಸುವಲ್ಲಿ ಮುಂಚುಣಿಯಲ್ಲಿ ಹೋರಾಟ ಮಾಡಿದವರು. ಶ್ರೀ ಪಂಚಾಕ್ಷರಿಯವರಿಗೆ ಈ ಕೃತಿ ರಚಿಸಲು ಪ್ರೇರಣೆಯಾದದ್ದು ಬಸವರಾಜ ಹುಡಗಿಯವರ ಶಿಥಿಲಗೊಂಡ ಪ್ರತಿಮೆ ನೋಡಿದ್ದಾಗ. ಇವರ ಚರಿತ್ರೆ ಬರೆಯಲು ಈ ಪ್ರತಿಮೆಯೇ ಪ್ರೇರಣೆ ಕೊಟ್ಟಿತ್ತು. ಮತ್ತು ಹುಡುಗಿಯವರ ಜನ್ಮ ಸ್ಥಳವಾದ ಬಗದಲ ಗ್ರಾಮದ ಇತಿಹಾಸವನ್ನ ಚಾರಿತ್ರಿಕವಾಗಿ ಚಿತ್ರಿಸಿದ್ದಾರೆ.

ಬಸವರಾಜ ಹುಡುಗಿಯವರು ಮಲಶೆಟೆಪ್ಪಾ ಮತ್ತು ಸಂಗಮ್ಮ ಎಂಬ ದಂಪತಿಗಳ ಉದರದಲ್ಲಿ ಹುಟ್ಟಿದರು. ಇವರ ಮನೆತನದ ಹೆಸರು ಹುಡಗಿ. ಇವರ ವಿದ್ಯಾಭ್ಯಾಸವು ಬಗದಲ ಮತ್ತು ಚಿಟಗುಪ್ಪಾ ಹಾಗೂ ಹೈದ್ರಾಬಾದದಲ್ಲಿ ನಡೆದುದನ್ನ ಸುಂದರವಾಗಿ ತಿಳಿಸಿದ್ದಾರೆ.

ಚಿಟಗುಪ್ಪಾ ಪರಿಸರವು ಬಸವರಾಜರ ಮೇಲೆ ಹೆಚ್ಚು ಪ್ರಭಾವ ಬೀರಿದ್ದು ಚಿಟಗುಪ್ಪಾ ಪಟ್ಟಣ.

ಅವರ ತಾಯಿಯ ತವರೂರಾದದ್ದು, ಚಿಟಗುಪ್ಪಾ ಬೀದರ ಜಿಲ್ಲೆಯಲ್ಲಿ ಅಂದು ಜಾಗ್ರತ ಪಟ್ಟಣವಾದದ್ದು. ಇದಕ್ಕೆ ಕಾರಣವೇನೆಂದರೆ ೧೯೩೦ ರಂದು ಆರ್ಯ ಸಮಾಜ ಸ್ಥಾಪನೆಯಾಗಿತ್ತು. ಹಿಂದೂ ಜನರ ಐಕ್ಯತೆ ಹುಟ್ಟಿಸಲು ಹಿಂದೂ ಧರ್ಮದಲ್ಲಿರುವ ಅಸ್ಪೃಶ್ಯತೆ, ಮೂಢ ನಂಬಿಕೆ, ಜಾತೀಯತೆ ಮುಂತಾದವುಗಳನ್ನು ನಿವಾರಿಸಲು ಉತ್ತರ ಭಾರತ ಮತ್ತು ಹೈದ್ರಾಬಾದ ಕಡೆಯಿಂದ ಆರ್ಯ ಸಮಾಜ ಮುಖಂಡರು ಬಂದು ಹೋಗುತ್ತಿದ್ದರು ಈ ವಿಷಯಗಳನ್ನು ಲೇಖಕರು ಚರ್ಚಿಸಿದ್ದಾರೆ.

ಬಸವರಾಜ ಹುಡಗಿಯವರ ಆಟೋಟದಲ್ಲಿರುವ ಹುಮ್ಮಸ್ಸು , ಇವರು ವಿವೇಕ ವರ್ಧಿನಿ ಶಾಲೆಯಲ್ಲಿ ಪಡೆದ ಶಿಕ್ಷಣದ ವಿವರಣೆ ಮತ್ತು ರಾಷ್ಟ್ರಭಕ್ತಿಯನ್ನು ಮೂಡಿಸುವ ಆರ್ಯ ಸಮಾಜದ ಕಾರ್ಯಕ್ರಮಗಳ ಬಗ್ಗೆ ಪಂಚಾಕ್ಷರಿಯವರು ಮಾರ್ಮಿಕವಾಗಿ ಬಣ್ಣಿಸಿದ್ದಾರೆ.

'ಫ್ರೀಡಂ ಕ್ಲಬ್' ಸ್ಥಾಪನೆ ಮತ್ತು ಅದರ ಧ್ಯೇಯ ಉದ್ದೇಶವನ್ನು ಮತ್ತು ರಮಾನಂದ ತೀರ್ಥರು ಬಂದು ಉಪನ್ಯಾಸ ನೀಡುತ್ತಿರುವುದನ್ನ ಹೇಳಿದ್ದಾರೆ.
ಅಲ್ಲದೆ ಅಲಹಾಬಾದ ಅಧಿವೇಶನಕ್ಕೆ ಹೋದಾಗ ಗಾಂಧೀಜಿಯವರನ್ನು ಬಸವರಾಜರು ಭೇಟಿಯಾದ ಘಟನೆಯು ಅವಿಸ್ಮರಣೀಯವಾದದ್ದು. ಇವರಿಬ್ಬರ ಸಂಭಾಷಣೆಯು ಈ ಭಾಗದ ಸ್ವಾತಂತ್ರ್ಯಕ್ಕಾಗಿ ಅಲ್ಲಲ್ಲಿನವರು ಅಲ್ಲಲ್ಲಿಯೇ ಹೋರಾಡಬೇಕೆಂಬ ಸಂದೇಶವನ್ನು ಲೇಖಕರು ಹೇಳಿದ್ದಾರೆ.

೧೯೪೨ರ 'ಭಾರತ ಬಿಟ್ಟು ತೋಲಗಿ' ಚಳುವಳಿಯು ಭಾರತದ ತುಂಬೆಲ್ಲ ನಡೆಯಿತು. ಅದೇ ರೀತಿ ಬೀದರ ಜಿಲ್ಲೆಯ ಚಿಟುಗುಪ್ಪಾ ಗ್ರಾಮದಲ್ಲಿ ಈ ಚಳುವಳಿ ನಡೆದದ್ದು ಸೋಜಿಗದ ಸಂಗತಿ. ಅಂದಿನ ಸರ್ವಾಧಿಕಾರಿ ರಾಜನ ಕಾಲದಲ್ಲಿ ಇಂತಹ ಚಿಕ್ಕ ಹಳ್ಳಿಯಲ್ಲಿ ಹೋರಾಟ ನಡೆದದ್ದು ಅಪೂರ್ವವೆಂದೇ ಹೇಳಬೇಕು. ಅಲ್ಲದೆ ಕಾಂಗ್ರೇಸ್ ಪಕ್ಷದ ಅಡಿಯಲ್ಲಿ ಹುಡಗಿಯವರು ಮಾಡಿದ ಅನೇಕ ಕಾರ್ಯಗಳು ಶ್ಲಾಘನೀಯವಾಗಿವೆ. ನಾಲಂದದಲ್ಲಿ ನಡೆದ ಕಾಂಗ್ರೇಸ್ ಅಧಿವೇಶನದಲ್ಲಿ ಅನೇಕ ಹಿರಿಯ ಮುಖಂಡರ ಸಮ್ಮುಖದಲ್ಲಿ ಹುಡಗಿಯವರು ಮಾಡಿದ ಭಾಷಣ ರೋಚಕವಾಗಿರುವುದನ್ನು ಹೇಳಿದ್ದಾರೆ.

ಮುಸಲ್ಮಾನ ಸಂಘಟನೆಯವರು ಸ್ವಾತಂತ್ರ್ಯ ಹೋರಾಟಗಾರರಿಗೆ ಯಾತನೆ ಕೊಡುವುದು, ಇದೇ ಸಂದರ್ಭದಲ್ಲಿ ಗಾಂಧೀಗಂಜ್ ದಹನವಾದದ್ದು, ಮತ್ತು ಈ ಸುದ್ದಿ ಗಾಂಧೀಜಿಗೆ ಮುಟ್ಟಿದ್ದು ಎಲ್ಲ ಅಂಶಗಳನ್ನು ಲೇಖಕರು ಚಿತ್ರಿಸಿದ್ದಾರೆ. ಚಿಟಗುಪ್ಪಾದಲ್ಲಿ ೧೯೩೭ ರಲ್ಲಿ ನಡೆದ ಮಹಾ ನವಮಿ ದಂಗೆಯಲ್ಲಿ ಹೈದ್ರಬಾದ ಸ್ವಾತಂತ್ರ್ಯವಾದದು. ಮತ್ತು ಹೈದ್ರಾಬಾದ ಆಡಳಿತ ಉಗ್ರವಾದಿ ರಜಾಕಾರರ ಕೈವಶವಾದುದನ್ನು ಈ ಚರಿತ್ರೆಯಲ್ಲಿ ಬರುತ್ತದೆ.

ಬಸವರಾಜ ಹುಡಗಿಯವರ ವಿವಾಹವು ಸೋಲಾಪುರದ ಜಿಲ್ಲೆಯ ಅಕ್ಕಲಕೋಟ ತಾಲೂಕಿನ ಪಾರ್ವತಿಬಾಯಿಯರೊಡನೆ ಆಯಿತು. ಇವರು ಹತ್ತನೇ ತರಗತಿಯಲ್ಲಿ ಪಾಸಾಗಿದ್ದಾರೆ. ಇವರ ಕೌಟುಂಬಿಕ ಜೀವನವನ್ನು ಮತ್ತು ಅವರಲ್ಲಿದ್ದ ರಾಷ್ಟ್ರ ಪ್ರೇಮವನ್ನ ವರ್ಣಿಸಿದ್ದಾರೆ.

ನಿಜಾಮನ ಮೇಲೆ ಬಾಂಬ ಹಾಕಲು 'ಫ್ರಿಡಂ ಕ್ಲಬ' ಹೊಂಚು ಹಾಕಿದ್ದು ಮತ್ತು ನಿಜಾಮನ ಮೇಲೆ ಬಾಂಬ ಹಾಕಿದಾಗ ಅವನು ಬದುಕುಳಿದಿದ್ದು ಅಲ್ಲದೆ ಬಾಂಬ ಹಾಕಿದವರನ್ನು ಹಿಡಿದುಕೊಟ್ಟವರಿಗೆ ಬಹುಮಾನ ವಿಟ್ಟದ್ದನ್ನು ಗೆಜೆಟನಲ್ಲಿ ಪ್ರಕಟವಾದದ್ದನ್ನು ಲೇಖಕರು ಮನಸ್ಸು ಕರಗುವಂತೆ ಹೇಳಿದ್ದಾರೆ.

ನಿಜಾಮನ ಮೇಲೆ ಬಾಂಬ ಹಾಕಿದ ದೇಶಪ್ರೇಮಿ ನಾರಾಯಣರಾವ ಅವರ ಪರಿಚಯವನ್ನು ಸಂಕ್ಷಿಪ್ತವಾಗಿ ಲೇಖಕರು ವಿವರಿಸಿದ್ದಾರೆ ಬಸವರಾಜರು ಮೂರುವೇಶದಲ್ಲಿ ಮನೆಗೆ ಬಂದು ಹೋಗುವಾಗ ಪೋಲಿಸರಿಗೆ ಚಳ್ಳೆಹಣ್ಣು ತಿನಿಸಿದ್ದನ್ನು ಹೃದಯಂಗಮವಾಗಿದೆ. ಬಸವರಾಜ ಹುಡುಗಿಯವರು ಸಂಕಟದಲ್ಲಿದ್ದವರಿಗೆ ತಮ್ಮ ಪ್ರಾಣವನ್ನು ಕೊಟ್ಟು ರಕ್ಷಿಸುವವರಾಗಿದ್ದರೆಂಬುದಕ್ಕೆ ಒಂದು ಘಟನೆ ಹೀಗೆ. ಚಿಟಗುಪ್ಪಾದ ವೀರಭದ್ರಪ್ಪಾ ಬಿಡಪ್ ಇವರಿಗೆ ರಜಾಕಾರರು ಪ್ರಾಣಾಂತಿಕ ಹಲ್ಲೆ ಮಾಡಿದ್ದರು. ಈ ಸುದ್ದಿ ತಿಳಿದ ಹುಡುಗಿಯವರು ನಿಜಾಮ ಪೋಲಿಸರ ವೇಶ ಧಾರಣ ಮಾಡಿ ನಿಜಾಮ ಪೋಲಿಸರಿಗೆ ಭ್ರಾಂತಿ ಹುಟ್ಟಿಸಿ ಇಲ್ಲಿಂದ ಬಿಡಪ್ ಅವರನ್ನು ಸೋಲಾಪುರ ಆಸ್ಪತ್ರೆಗೆ ಕರೆದೊಯ್ದದ್ದು ಇವರ ಸಾಹಸದ ಕಾರ್ಯವನ್ನು ರೋಮಾಂಚನಕಾರಿಯಾಗಿ ಚಿತ್ರಿಸಿದ್ದಾರೆ.

ನಿಜಾಮನ ರಾಜ್ಯವನ್ನು ಕಿತ್ತು ಹಾಕುವ ಉದ್ದೇಶದೊಂದಿಗೆ ನೂರಾರು ಶಿಬಿರಗಳನ್ನ ಸ್ಥಾಪನೆಯಾಗಿದ್ದವು. ಮತ್ತು ಈ ಶಿಬಿರದಲ್ಲಿ ಶಸ್ತ್ರಾಸ್ತ್ರ ಗುಪ್ತಚರ, ಮತ್ತು ನಿಶಸ್ತ್ರ ಸೇವಕರ ಧೈರ್ಯವನ್ನು ಮತ್ತು ಸಾಹಸವನ್ನು ಬಣ್ಣಿಸಿದ್ದಾರೆ. ಮುತ್ತಿಗೆ ಹಾಕಿದ ರಜಾಕಾರರಿಂದ ನೂರಾರು ಶಿಬಿರಾರ್ಥಿಗಳ ಪ್ರಾಣವನ್ನುಳಿಸಲು ರಾಮಲು ಅವರು ತಮ್ಮ ಪ್ರಾಣವನ್ನ ಕೊಟ್ಟ ಪ್ರಸಂಗ ಇದರಲ್ಲಿ ಬಂದಿದೆ.

ಬಸವರಾಜರು 'ವಾಕದರಿ' ಶಿಬಿರದ ಮುಖ್ಯಸ್ಥರಾದದ್ದು. ಇವರು ಸಶಸ್ತ್ರಾಸ್ತ್ರಗಳನ್ನ ಶಿಬಿರಗಳಿಗೆ ಪೂರೈಸಲು ಹಣ ಕಡಿಮೆ ಬಿದ್ದಾಗ ತಮ್ಮ ಮನೆಯ ಬಂಗಾರವನ್ನು ಸ್ನೇಹಿತರಿಂದ ಕಳವು ಮಾಡಿಸಿ ತರಿಸಿಕೊಂಡರು. ಅದಲ್ಲದೆ ಹೆಂಡತಿಯ ಮೈಮೇಲಿನ ಬಂಗಾರವನ್ನು ಮಾರಾಟ ಮಾಡಿ ಶಸ್ತ್ರಾಸ್ತ್ರಗಳನ್ನು ಗೋವಾದಿಂದ ತರಿಸಿಕೊಂಡರು. ಈ ಘಟನೆಯನ್ನು ಬಸವರಾಜ ಹುಡುಗಿಯವರ ಸ್ವಧನ ತ್ಯಾಗವನ್ನು ಲೇಖಕರು ಚಿತ್ರಿಸಿದ್ದಾರೆ.

ಬೀದರ ತಾಲೂಕಿನ ಬಾವಗಿಯ ಹತ್ತಿವಿರುವ ನೆಲವಾಳದಲ್ಲಿ ಶಸ್ತ್ರಾಸ್ತ್ರ ಮತ್ತು ಕೈಬಾಂಬುಗಳನ್ನು ರಹಸ್ಯವಾಗಿ ಶೇಖರಿಸಿಡುತ್ತಿದ್ದರು. ಈ ಶಸ್ತ್ರಾಸ್ತ್ರಗಳನ್ನು ಪೂರೈಸುವ ಜವಾಬ್ದಾರಿ ಬಸವರಾಜ ಹುಡಗಿಯವರ ಮೇಲಿದ್ದದ್ದು, ಚಿಟಗುಪ್ಪಾದ ಗೊವಿಂದ ಕಟಗಿಯವರು ಬಾಂಬ ತರುವಾಗಿನ ಪ್ರಸಂಗವನ್ನ ಚಿತ್ರಿಸಿದ್ದಾರೆ.

ಅಂದಿನ ಅಧಿಕಾರಿಗಳ ದರ್ಪ, ಅವರ ಪ್ರಚೋದನಕಾರಿ ಭಾಷಣಗಳಿಂದ ಹಿಂದೂ ಮಹಿಳೆಯರ ಮೇಲೆ ಅತ್ಯಾಚಾರ ಹಾಗೂ ಆಸ್ತಿ ಪಾಸ್ತಿ ಬೆಂಕಿ ಹಚ್ಚಿದ ಪ್ರಕರಣ, ಗೋರ್ಟಾ ಗ್ರಾಮವು ಲಂಕಾ ಪಟ್ಟಣದಂತೆ ಸುಟ್ಟು ನೂರಾರು ಜನರು ಮರಣ ಹೊಂದಿದದ್ದ ಪ್ರಸಂಗ ಈ ಕೃತಿಯಲ್ಲಿ ಲೇಖಕರು ಹೇಳಿದ್ದಾರೆ. ಹೈದ್ರಾಬಾದ ವಿಮೋಚನೆ ಹೊಂದುವ ಮೂರು-ನಾಲ್ಕು ತಿಂಗಳು ಮೊದಲೆ ಗೋವಾ ಚಳುವಳಿಯಲ್ಲಿ ಭಾಗವಹಿಸಿ ವೀರ ಮರಣವನ್ನಪ್ಪಿದ ಬಸವರಾಜ ಹುಡಗಿಯವರು ಗೋವಾದ ಪ್ರತಿಯೊಂದು ಚಳುವಳಿಯಲ್ಲಿ ಭಾಗವಹಿಸುತ್ತಿದ್ದರು. ೧೯೪೮ ರ ಮೇ ತಿಂಗಳಲ್ಲಿ ಗೋವಾದಲ್ಲಿ ಬೃಹತ ಚಳುವಳಿ ನಡೆದದ್ದು, ಸತ್ಯಾಗ್ರಹಿಗಳ ಮೇಲೆ ಪೋರ್ಚುಗೀಸರು ಗಂಡು ಹಾರಿಸಿದ್ದು ಈ ಹುತಾತ್ಮರ ಸ್ಮರಣಾರ್ಥ ಗೋವಾದ 'ಪತ್ರಾದೇವಿ' ಎಂಬಲ್ಲಿ ಸ್ಮಾರಕವು ನಿಲ್ಲಿಸಲಾಗಿದ್ದು. ಭಾರತದ ಹತ್ತು ಜನರ ವೀರ ಹುತಾತ್ಮರ ಹೆಸರನ್ನು ಈ ಸ್ಮಾರಕದ ಮೇಲೆ ಬೆರೆಯಲಾಗಿದ್ದದ್ದು. ವಿವರಣಾತ್ಮಕವಾಗಿ ಬರೆದಿದ್ದಾರೆ. ಇವರ ಅಂತ್ಯ ಕ್ರಿಯೆಯು ಅಕ್ಕಲಕೋಟದಲ್ಲಿ ಜರುಗಿತು.

ಈ ಎಲ್ಲ ವಿಷಯಗಳ ವಿಸ್ತಾರವಾಗಿ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಬರೆದು ಕನ್ನಡಿಗರಿಗೆ ಬಸವರಾಜ ಹುಡುಗಿಯವರ ಮತ್ತು ಅಂದಿನ ಕಾಲಮಾನದಲ್ಲಿ ನಡೆಯುತ್ತಿದ್ದ ಅನೇಕ ಚಟುವಟಿಕೆಗಳನ್ನು ಚಿತ್ರಿಸಿದ್ದಾರೆ.

ಈ ಚರಿತ್ರೆಯು ಇಂದಿನ ಯುವಕರಿಗೆ ಸ್ಫೂರ್ತಿದಾಯಕವಾಗಿದೆ. ಬಸವರಾಜ ಹುಡುಗಿಯವರ ಸರ್ವಸ್ವತ್ಯಾಗ ಮಾಡಿರುವುದು. ಶಸ್ತ್ರಾಸ್ತ್ರ ಒದಗಿಸಿದುದ್ದನ್ನ ,ಅವರ ಧೈರ್ಯ ಸಾಹಸವನ್ನು ಮೆಚ್ಚುವಂತಹದ್ದು ಆಜಾದ, ಭಗತಸಿಂಗರಂತೆ ಹುಡುಗಿಯವರು ಅಜರಾಮರರಾಗಿದ್ದಾರೆ, ಈ ಚರಿತ್ರೆಯನ್ನ ಕುರಿತು ಸಿಂಪಿ ಲಿಂಗಣ್ಣನವರು ಹೀಗೆ ಹೇಳಿದ್ದಾರೆ. ''ಈ ಪುಸ್ತಕವು ನೇರವಾದ ಸಂಜೀವಿನಿಯಾಗಿದೆ.''[೧] ಇದು ಚಿಕ್ಕ ಕೃತಿಯಾದರು ಕನ್ನಡ ಹೋರಾಟದ ತಿರುಳು ಒಳಗೊಂಡಿದೆ. ಶ್ರೀ ಪಂಚಾಕ್ಷರಿಯವರು ಬರೆದ ಹುತಾತ್ಮ ಬಸವರಾಜ ಹುಡಗಿ ಅಂದಿನ ಕಾಲಮಾನ ಪುಸ್ತಕವು ಐತಿಹಾಸಿಕ, ಘಟನೆಗಳು ಮತ್ತು ಸಾಕ್ಷಿ ಆಧಾರಗಳಿಂದ ಕೂಡಿಕೊಂಡಿರುವ ಕೃತಿಯಾಗಿದೆ.

**ಪತ್ರಿಕೋದ್ಯಮ ಸಾಹಿತ್ಯ:**

ಪಂಚಾಕ್ಷರಿ ಪುಣ್ಯಶೆಟ್ಟಿಯವರು ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಲೇ ಕನ್ನಡ ಸೇವೆ ಶರಣರ ಸೇವೆ ಮತ್ತು ಪತ್ರಿಕೋದ್ಯಮದಲ್ಲಿಯೂ ಕೂಡ ಸೇವೆ ಸಲ್ಲಿಸಿದ್ದಾರೆ. ತಮ್ಮ ಬಿಡುವಿನ ಸಮಯದಲ್ಲಿ ಉತ್ತರ ಕರ್ನಾಟಕ ದಿನ ಪತ್ರಿಕೆಯಲ್ಲಿ ಪ್ರತಿದಿನ ಕೆಲಸ ಮಾಡುತ್ತಿದ್ದರು. ಬಂದ ವರದಿಗಳನ್ನ ಸಂಕ್ಷಿಪ್ತವಾಗಿ ಬರೆಯುವುದು. ಆಕಾಶವಾಣಿ ವಾರ್ತೆಗಳನ್ನು ಸಂಕ್ಷಿಪ್ತಗೊಳಿಸಿ ಬರೆಯುವುದು. ಪ್ರೂಫ ನೋಡುವುದು ಸಂದರ್ಭಕ್ಕನುಸರಿಸಿ ಲೇಖನಗಳನ್ನ ಬರೆಯುವ ಹವ್ಯಾಸ ಇಟ್ಟುಕೊಂಡಿದ್ದರು, ಉತ್ತರ ಕರ್ನಾಟಕ ಪತ್ರಿಕೆಯಲ್ಲಿ ಬರೆದ ಕೆಲವು ಲೇಖನಗಳನ್ನು ಸಂಕ್ಷಿಪ್ತವಾಗಿ ವಿವೇಚಿಸಲಾಗಿದೆ.

**೧. ಲಿಂಗಾನಂದ ಮಹಾಸ್ವಾಮಿಗಳು ಮಾಡಿದ ಕ್ರಾಂತಿ - ೨೯.೦೮.೧೯೯೫**

ಲಿಂಗಾನಂದ ಸ್ವಾಮಿಗಳು ಬೀದರ ಜಿಲ್ಲೆಗೆ ಸುಮಾರು ೧೯೬೫ ಆಗಮಿಸಿದುದು ಸುದೈವವೆಂದೇ ಹೇಳಬೇಕು. ಅವರ ಆಗಮನದಿಂದ ಬೀದರ ಜಿಲ್ಲೆಯಲ್ಲಿ ಶಿವಶರಣರ ಸಮಾನತೆಯ ತತ್ವ ಪ್ರಚಾರ, ಅಸ್ಪೃಶ್ಯತಾ ನಿವಾರಣೆ, ಮೂಢನಂಬಿಕೆ, ಮುಂತಾದ ಅನಿಷ್ಟಗಳು ತಲ್ಲಣಿಸಿದವು. ಜನರ ಮೌಢ್ಯತೆ, ಅಜ್ಞಾನವು ಏನೆಂಬುದನ್ನು ತಿಳಿಯಿತು. ಸುಧಾರಣಾವಾದಿಗಳು ಇವರ ತತ್ವಗಳನ್ನು ತಲೆಯ ಮೇಲಿಟ್ಟು ಕುಣಿದರೆ ಜಾತಿವಾದಿಗಳು ಇವರ ನಿಂದನೆಯಲ್ಲಿ ಕಾಲಕಳೆದರು. ಇವರು ಮೊದಲು ಆಗಮಿಸಿದ್ದು ಔರಾದ ಪಟ್ಟಣಕ್ಕೆ. ಬಿಜಾಪೂರಿನ ರಾಮಣ್ಣಗೌಡ ಎಂಬ ಶಿಕ್ಷಕರು ಇವರನ್ನು ವಾರ್ಷಿಕ ಶಾಲಾ ದಿನಾಚರಣೆ ಸಂದರ್ಭದಲ್ಲಿ ಕರೆಯಿಸಿಕೊಂಡಿದ್ದರು. ಇವರ ಭಾಷಣ ಔರಾದ ಜನರಿಗೆ ಬಹಳ ಹಿಡಿಸಿತ್ತು. ಇವರನ್ನು ಮತ್ತೊಮ್ಮೆ ಕರೆಸಿಕೊಂಡು ಇವರ ಪ್ರವಚನ ಔರಾದನಲ್ಲಿ ನಡೆಯಿತು. ಇವರ ಪ್ರವಚನದ ಪ್ರಭಾವ ಎಷ್ಟಿತ್ತೆಂದರೆ ಸುತ್ತಲಿನ ಹಳ್ಳಿಗಳ ಸಾವಿರಾರು ಜನರು ಬಂಡಿಯ ಮೇಲೆ, ಪಾದಚಾರಿಗಳಾಗಿ ಬಂದು

---

೧) ಸ್ವಾತಂತ್ರ್ಯ ಹುತಾತ್ಮ ಬಸವರಾಜ ಹುಡಗಿ. ಬೆನ್ನುಡಿ.

ಕೇಳುತ್ತಿದ್ದರು. ಆ ಸಂದರ್ಭದಲ್ಲಿ ವಾಹನದ ಅನುಕೂಲತೆಗಳಿರಲಿಲ್ಲ. ಇವರ ಸದುಪಯೋಗ ಬೀದರ ನಾಗರಿಕರಿಗೂ ಸುಲಭವಾಗಿ ಲಭಿಸಿತು. ಜನದಟ್ಟಣೆ ಹೆಚ್ಚಾದ ಕಾರಣ ಇವರ ಪ್ರವಚನವು ಎರಡು ಮೂರು ಕಡೆ ಬದಲಾಯಿಸಿ ಗಣೇಶ ಮೈದಾನದಲ್ಲಿಡಲಾಯಿತು. ಅಂತಹ ಪ್ರಭಾವಿ ಭಾಷಣಕಾರರಾಗಿದ್ದರು. ಬೀದರ ನಗರದಲ್ಲಿ ಹಿಂದೆ ಪ್ರವಚನ ಕೇಳಲು ಇಷ್ಟು ಸಂಖ್ಯೆಯಲ್ಲಿ ಜನರು ಆಗಮಿಸಿರಲಿಲ್ಲ ಎಂದು ಹಿರಿಯರು ಹೇಳುತ್ತಿದ್ದರು. ಇವರು ಬೀದರ ಜನರಿಗೆ ಕೊಟ್ಟ ಸಂದೇಶವೇನೆಂದರೆ ವ್ಯಕ್ತಿಯನ್ನ ಗೌರವಿಸಿರಿ, ತತ್ವವನ್ನ ಪಾಲಿಸಿರಿ, ಬಸವಣ್ಣನವರೆ ನಮ್ಮ ಧರ್ಮಗುರುಗಳು ವಚನ ಸಾಹಿತ್ಯವೇ ನಮ್ಮ ಧರ್ಮ ಗ್ರಂಥ ಎಂದು ಹೇಳಿರುವುದನ್ನು ಬೀದರ ಜನತೆ ಮರೆತಿಲ್ಲ.

### ೨. ದಾಸೋಹಮೂರ್ತಿ ಶ್ರೀ ಹಳೆಂಬರ ವೀರಭದ್ರಪ್ಪನವರು. ೦೪-೦೫-೧೯೮೬.

ಹಳೆಂಬರ ವೀರಭದ್ರಪ್ಪನವರು ೧೮೭೭ ರಲ್ಲಿ ಜನಿಸಿದರು ಅವರ ಊರಿನ ಹೆಸರು ಮನೆತನದ ಹಸಿರಾಗಿದೆ. ಅವರು ಎಪ್ಪತ್ತು ವರ್ಷ ಬಾಳಿದರು. ಸುಮಾರು ೧೯೪೭ ರಲ್ಲಿ ಲಿಂಗೈಕ್ಯರಾದರು. ಇವರು ಮುಖ್ಯ ಉದ್ದೇಶ ದಾಸೋಹ ನಡೆಸುವುದು. ಎಲ್ಲಕ್ಕಿಂತಲು ದೊಡ್ಡ ಖಾಂಡ ಮಾಡಿದ್ದು ಮೈಲಾರದಲ್ಲಿ ೧೦೮ ಕಡಾಯಿ ಹುಗ್ಗಿ ಮಾಡಿಸಿದ್ದರು. ಜನರಿಗೆ ಹಂಚಿ ಉಂಬುವುದನ್ನು ಕಲಿಸಿದರು. ಜಾತಿಯ ಭಾವನೆ ಇರಲಿಲ್ಲ. ಅವರ ಗುರುಗಳೆಂದರೆ ಶಂಭುಲಿಂಗ ಎಲ್ಲಪ್ಪನವರು. ಪ್ರತಿವರ್ಷ ಗುರುವಿನ ಪುಣ್ಯತಿಥಿ ಜಾತ್ರೆ ರೂಪದಲ್ಲಿ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಗಾಯಮುಖ ಅರಣ್ಯದಲ್ಲಿ ಅನುಷ್ಠಾನ ಮಾಡಿದವರಾಗಿದ್ದರು. ವಾಕಸಿದ್ಧಿ ಅವರಿಗೆ ಲಭಿಸಿತು. ಚಿಕ್ಕವರಿರಲಿ ದೊಡ್ಡವರಿರಲಿ ಎಲ್ಲರನ್ನು ಅಪ್ಪ ಎಂದು ಸಂಬೋಧಿಸುತ್ತಿದ್ದರು. ಸರ್ವಜೀವಿಗಳಲ್ಲಿಯೂ ಅವರು ಪರಮಾತ್ಮನನ್ನ ಕಾಣುತ್ತಿದ್ದರು ಎಂಬುದಕ್ಕೆ ಅವರ ಬದುಕು ಸಾಕ್ಷಿಯಾಗಿದೆ. ಭಜನೆಯಿಂದ ಭಕ್ತಿ ಬೆಳೆಯುತ್ತದೆಂದು ಹೇಳುತ್ತಿದ್ದರು. ಆದಕಾರಣ ಇವರು ಭಜನೆಗೆ ಮಹತ್ವಕೊಟ್ಟಿದ್ದರು. ಮರಾಠಿ ಮತ್ತು ಕನ್ನಡದಲ್ಲಿ ಹಾಡುಗಳನ್ನ ರಚಿಸಿದ್ದಾರೆಂದು ಹೇಳುತ್ತಾರೆ. ಇವರು ವಿಠೋಬಾನ ಭಕ್ತರಾಗಿದ್ದರು. ಸಂತ ತುಕಾರಾಮರ ಮರಾಠಿಯ ಭಂಗಗಳನ್ನ ಪ್ರತಿದಿನ ಪಠಿಸುವ ರೂಢಿಯನ್ನು ಇಟ್ಟುಕೊಂಡಿದ್ದರು.

### ೩. ವರ ಕವಿ ಕರಬಸಪ್ಪ ಐನೊಳಿ.೦೬-೦೩-೧೯೯೨

ವರಕವಿ ಕರಬಸಪ್ಪನವರು ಐನೊಳಿ ಗ್ರಾಮದವರು. ಈ ಗ್ರಾಮ ಬೀದರ ಜಿಲ್ಲೆಯ ತಾಲೂಕಿನ ಗಡಿಗೆ ಹತ್ತಿರ. ಇದು ಚಿಂಚೋಳಿ ತಾಲೂಕಿನಲ್ಲಿದೆ. ಬಾಲ್ಯದಲ್ಲಿ ಇರುವಾಗಲೆ ಇವರ ತಂದೆಯವರು ಲಿಂಗೈಕ್ಯರಾದರು. ತಾಯಿಯೇ ಇವರಿಗೆ ಪಾಲನೆ ಪೋಷಣೆ ಮಾಡಿದರು. ದನ ಕಾಯುವ ಕೆಲಸ ಮಾಡುತ್ತಿದ್ದರು. ಇವರ ಮನೆತನದ ಗುರುಗಳು ಚಿಟಗುಪ್ಪದ ಐಯಪ್ಪ ಸ್ವಾಮಿ ಮಠದವರು. ಗುರುಗಳು ಇವರ ಬುದ್ಧಿವಂತಿಕೆಯನ್ನು ಕಂಡು ಮುಂದೆ ಇವರು ದೊಡ್ಡ ಕವಿಯಾಗುತ್ತಾರೆಂದು ಇವರ ತಾಯಿಗೆ ಹೇಳಿದರು. ಇವರಿಗೆ ದನ ಕಾಯುವುದನ್ನು ಬಿಡಿಸಿ ಸುಲೇಪೇಟ ಮಠದಲ್ಲಿ ವಿದ್ಯಾಭ್ಯಾಸಕ್ಕಾಗಿ ಇಟ್ಟರು. ಸಂಸ್ಕೃತ ಮತ್ತು ಕನ್ನಡದಲ್ಲಿ ಪ್ರಾವೀಣ್ಯತೆಯನ್ನು ಪಡೆದರು. ಇವರು ಭೋಗಲಿಂಗೇಶ್ವರ ದೇವಾಲಯ

ಮತ್ತು ದೇವಗಿರಿಯ ಕಾಡಿನ ದೇವಿ ದೇವಾಲಯದಲ್ಲಿ ಅನುಷ್ಠಾನ ಮಾಡಿದ್ದರು. ಇವರು ಕನ್ನಡ ಸಂಸ್ಕೃತದಲ್ಲಿ ಕಾವ್ಯಗಳನ್ನು ರಚಿಸಿದರು. ಇವರು ಸ್ಕಂದಪುರಾಣ ಬೃಹತ್ಗ್ರಂಥ ಷಟ್ಪದಿಯಲ್ಲಿ ಬರೆದಿದ್ದಾರೆ. ಅನೇಕ ಶತಕಗಳನ್ನ ರಚಿಸಿದ್ದಾರೆ. ಇವರ ಐದು ನೂರಕ್ಕೂ ಹೆಚ್ಚು ಸ್ವರ ವಚನಗಳನ್ನು ದೊರಕಿವೆ. ಇವರ ಸಾಹಿತ್ಯದ ಮೇಲೆ ಶಣ್ಮುಖಯ್ಯ ಸ್ವಾಮಿಯವರು ಪಿಎಚ್.ಡಿ. ಮಾಡಿದ್ದಾರೆ. ಅಲ್ಲದೆ ಎಂ.ಫಿಲ್ ಪದವಿಗಾಗಿ ಅಧ್ಯಯನ ಮಾಡಿದ್ದಾರೆ. ಇವರ ಮನೆತನದವರಾದ ವಿರುಪಾಕ್ಷ ಸ್ವಾಮಿಗಳು ಇವರಿಂದ ರಚಿಸಲ್ಪಟ್ಟ ಹಾಗು ಸಂಗ್ರಹಿಸಿದ ಅನೇಕ ಹಸ್ತ ಪ್ರತಿಗಳು ಕಲ್ಬುರ್ಗಿ ವಿಶ್ವವಿದ್ಯಾಲಯದವರು ತೆಗೆದುಕೊಂಡು ಹೋಗಿದ್ದಾರೆ. ಇವರ ಮನೆಯಲ್ಲಿಯೇ ನೃಪತುಂಗ ಕವಿಯ ಕವಿರಾಜ ಮಾರ್ಗವು ದೊರಕಿದೆ. ಇಂತಹ ಮಹಾನ ಕವಿಯ ಬಗ್ಗೆ ವಿಶ್ವವಿದ್ಯಾಲಯದವರು ಸಂಗ್ರಹಿಸಿದ ಹಸ್ತಪ್ರತಿಗಳನ್ನು ಸಂಶೋಧಿಸಿ ಪ್ರಕಟಿಸಬೇಕು. ಈಗಾಗಲೆ ಒಂದು ಗ್ರಂಥ ಪ್ರಕಟವಾಗಿದೆ.

**೪. ಸಂಯಮಶೀಲ, ಆದರ್ಶ ಪ್ರಾಧ್ಯಾಪಕ, ಬಸವಲಿಂಗಪ್ಪಾ ಕೊಂಡಾ. ೦೩-೦೭-೧೯೮೭.**

ಬೀದರ ಜಿಲ್ಲೆಯಲ್ಲಿ ಬಸವಲಿಂಗಪ್ಪಾ ಕೊಂಡಾರವರ ಹೆಸರು ಕೇಳದವರೇ ಇಲ್ಲ. ಇವರು ಜನಿಸಿದ್ದು ಬೀದರ ಜಿಲ್ಲೆಯ ಹೋಕ್ರಾಣಾ (ಬಿ) ಯಲ್ಲಿ. ತಂದೆ ರಾಚಪ್ಪಾ ತಾಯಿ ಸಂಗಮ್ಮ ಇವರ ಶಿಕ್ಷಣ ಮನ್ನಳಿಯಲ್ಲಿ ಜರುಗಿತು. ಅಲ್ಲಿ ಬೋಧಿಸುವ ಶಿಕ್ಷಕರನ್ನು ಇವರು ಈಗಲೂ ಸ್ಮರಿಸುತ್ತಾರೆ. ಬೀದರನ ಮಲ್ಟಿಪರ್ಪಸ ಸರಕಾರಿ ಶಾಲೆಯಲ್ಲಿ ಅಭ್ಯಾಸ ಮಾಡಿ ಟಿ.ಸಿ.ಎಚ್. ಶಿಕ್ಷಣ ತರಬೇತಿ ಪಡೆದರು. ಗುಲ್ಬರ್ಗ ವಿಭಾಗಕ್ಕೆ ಪ್ರಪ್ರಥಮವಾಗಿ ಉತ್ತೀರ್ಣರಾದರು. ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಬರಬರುತ್ತಾ ರಾಜ್ಯ ಶಾಸ್ತ್ರದಲ್ಲಿ ಎಂ.ಎ.ಮಾಡಿ ಭೂಮರೆಡ್ಡಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾದರು. ರೋಟರಿ ಕ್ಲಬ್ಬಿನ ಸದಸ್ಯರಾಗಿ ಅಭೂತ ಪೂರ್ವ ಕೆಲಸ ಮಾಡಿದ್ದಾರೆ. ಇವರು ಮಾಡಿದ ಉಪನ್ಯಾಸಗಳು ಜಿಲ್ಲಾದ್ಯಂತ ಜನಮೆಚ್ಚುಗೆ ಪಡೆದಿವೆ. ನುಡಿದರೆ ಮುತ್ತಿನ ಹಾರಿದಂತಿರಬೇಕು ಎಂಬ ವಚನಕ್ಕೆ ಅನುಗುಣವಾಗಿ ಇವರ ಮಾತುಗಳಿವೆ. ಇವರು ಬೀದರ ಜಿಲ್ಲೆಯ ಪುರಾತನ ಇತಿಹಾಸ ಪರಿಚಯ ಮಾಡಿಕೊಳ್ಳಬೇಕಾದರೆ ಇವರ ಹತ್ತಿರ ಹೋಗಬೇಕಾಗುತ್ತದೆ. ಇವರ ವ್ಯಕ್ತಿತ್ವ ಆದರ್ಶಪ್ರಾಯವಾಗಿದೆ. ಕೋಪವಿಲ್ಲ, ಆಡಂಬರವಿಲ್ಲ, ಮಿತಭಾಷಿಗಳು, ಹರಟೆ ಹೊಡೆಯುವವರಲ್ಲ, ಅಶ್ಲೀಲತೆ ಇವರ ಕಡೆ ಹಾಯದು. ಶುಭ್ರವಾದ ಚರಿತ್ರೆಯುಳ್ಳವರಾಗಿದ್ದಾರೆ. ಇವರು ವಚನವಾಗ್ಮಯದಿಂದಲೂ ಹಾಗು ವಿವೇಕಾನಂದರ ಸಾಹಿತ್ಯದಿಂದಲೂ ಪ್ರಭಾವಿತರಾಗಿದ್ದಾರೆ.

**೫. ಬಿ.ವಿ.ಬಿ. ಭೂಮರೆಡ್ಡಿ ಕಾಲೇಜು ನಡೆದು ಬಂದ ದಾರಿ. ೨೨-೦೨-೧೯೮೮.**

ಈ ಲೇಖನದಲ್ಲಿ ಭೂಮರೆಡ್ಡಿ ಕಾಲೇಜು ಸ್ಥಾಪನೆಯಾದದ್ದು, ಇದಕ್ಕಾಗಿ ಪ್ರಯತ್ನ ಪಟ್ಟವರು. ಮತ್ತು ಈ ಕಾಲೇಜಿನಿಂದ ಬೀದರ ಜಿಲ್ಲೆಯಲ್ಲಿ ಆದ ಪ್ರಗತಿ ಮುಂತಾದ ವಿಷಯಗಳು ಈ ಲೇಖನದಲ್ಲಿ ಅಡಕವಾಗಿವೆ. ಬೀದರ ಜಿಲ್ಲೆಯಲ್ಲಿ ಕೇವಲ ಕೈಬೆರಳಿನ ಮೇಲೆ ಎಣಿಸುವಷ್ಟು ಪ್ರೌಢ ಶಾಲೆಗಳಿದ್ದವು. ಮ್ಯಾಟ್ರಿಕ್ ಪಾಸಾದ ವಿದ್ಯಾರ್ಥಿಗಳು ಅರ್ಧಕ್ಕೆ ತಮ್ಮ ವಿದ್ಯಾಭಾಸಕ್ಕೆ ತೀಲಾಂಜಲಿ ಕೊಡುತ್ತಿದ್ದರು.

ಮುಖಂಡರ ಮಕ್ಕಳು, ಸಿರಿವಂತರ ಮಕ್ಕಳು ಮಾತ್ರ ಮುಂದಿನ ಶಿಕ್ಷಣಕ್ಕಾಗಿ ಹೈದ್ರಾಬಾದ ಮುಂತಾದ ಕಡೆಗೆ ಹೋಗುತ್ತಿದ್ದರು. ಬಡವರ ಗೋಳು ಕೇಳುವವರೆ ಇರಲಿಲ್ಲ. ಕಲ್ಬುರ್ಗಿಯಲ್ಲಿ ರಾಂಪುರೆಯವರು ೧೯೫೮ ಕ್ಕೆ ಎಚ್.ಕೆ.ಇ. ಸೊಸೈಟಿ ಸ್ಥಾಪಿಸಿದರು. ಅನಂತರ ಬೀದರನ ಸ್ಥಳೀಯರ ಬೇಡಿಕೆಯ ಮೇರೆಗೆ ಬೀದರನಲ್ಲಿ ೧೯೬೦ ಮೇ ೨೫ ಕ್ಕೆ ಕಾಲೇಜು ಪ್ರಾರಂಭವಾಯಿತು. ಇದಕ್ಕೆ ವೀರಪ್ಪ ಬಸಪ್ಪ ಭೂಮರೆಡ್ಡಿ ಹುಬ್ಬಳ್ಳಿಯವರು ೫೦ ಸಾವಿರ ರೂಪಾಯಿ ದಾನ ಮಾಡಿದರು. ಇವರ ಹೆಸರನ್ನು ಕಾಲೇಜಿಗೆ ಇಡಲಾಯಿತು. ಬೀದರನ ಪ್ರಪ್ರಥಮ ಕಾಲೇಜು ಇದಾಗಿದೆ. ಬಿ. ಟಿ. ಸಾಸನೂರರವರೆ ಪ್ರಪ್ರಥಮ ಪ್ರಾಚಾರ್ಯರಾಗಿದ್ದರು. ಇವರ ಪ್ರಯತ್ನದ ಫಲವೇ ಇಂದು ನಾವು ನೋಡುವ ಭವ್ಯವಾದ ಬಿ.ವಿ.ಬಿ. ಕಟ್ಟಡ. ಬಿ.ಟಿ.ಸಾಸನೂರರು ಆಡಳಿತಗಾರರು, ಬಡವರ ಬಂಧುಗಳು ಆದ ಇವರ ಮಾರ್ಗದರ್ಶನದಲ್ಲಿ ಅನೇಕ ಬಡ ವಿದ್ಯಾರ್ಥಿಗಳು, ಆಡಳಿತಗಾರರು ,ನ್ಯಾಯವಾದಿಗಳು, ಸಾಹಿತಿಗಳು ಆಗಿದ್ದಾರೆ. ಬೀದರ ಜಿಲ್ಲೆ ಇವರಿಗೆ ಕೃತಜ್ಞರಾಗಿರಬೇಕು.

### ೬. ಲಂಬಾಣಿ ಜನಾಂಗದವರ ಜೀವನದ ಬಗೆಗೆ ಸಮೀಕ್ಷೆ . ೧೪-೦೮-೧೯೮೬.

ಲೇಖಕರು ಲಂಬಾಣಿ ಜನಾಂಗದ ಜೀವನದ ಸಮೀಕ್ಷೆ ಮಾಡುವುದಕ್ಕಿಂತಲು ಮೊದಲು ಅನೇಕ ಲಂಬಾಣಿ ತಾಂಡಾಗಳಿಗೆ ಭೇಟಿ ಕೊಟ್ಟಿದ್ದಾರೆ. ಲಂಬಾಣಿ ಜನಾಂಗದ ಹಿರಿಯರೊಡನೆ ಸಂದರ್ಶಿಸಿದ್ದಾರೆ. ಇವರ ಪ್ರಯತ್ನದ ಫಲವಾಗಿಯೇ ಲಂಬಾಣಿ ಜನಾಂಗದ ಸಂಪೂರ್ಣ ಚಿತ್ರಣ ನಮ್ಮ ಕಣ್ಣ ಮುಂದೆ ಬಂದು ನಿಲ್ಲುತ್ತದೆ. ಈ ಜನಾಂಗದವರು ಮೊದಲು ಮುಖ್ಯವಾಗಿ ಉಪ್ಪಿನ ಸಾಗಾಟ ಎತ್ತಿನ ಮೇಲೆ ಮಾಡುತ್ತಿದ್ದರು. ಸಾರಿಗೆ ಸಂಪರ್ಕ ಹೆಚ್ಚಿದಂತೆ ಅವರ ವೃತ್ತಿ ನಿಂತು ಹೋಯಿತು. ಗುಡ್ಡಗಾಡಿನಲ್ಲಿ ಉಳಿದು ಪಶು ಸಂಗೋಪನ ವೃತ್ತಿ ಕೈಗೊಂಡರು. ಪುರಾತನ ಸಂಸ್ಕೃತಿ ಛಾಯೆಗಳು ಇನ್ನು ಇವರ ಬಾಳಿನಲ್ಲಿ ಕಾಣಬಹುದಾಗಿದೆ. ಅಶಿಕ್ಷಿತರು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಕಠೋರ ಪರಿಶ್ರಮಿಗಳು. ಅತಿಥಿ ಸತ್ಕಾರ ಮಾಡುವುದರಲ್ಲಿ ಇವರು ಮುಂದು. ಇವರ ಸಂಸ್ಕಾರ ಪದ್ಧತಿ ವಿಚಿತ್ರ. ವಿವಾಹಿತರ ಮರಣವನ್ನಾದರೆ ಸುಡುತ್ತಾರೆ, ಅವಿವಾಹಿತರಿಗೆ ಸಮಾಧಿ ಮಾಡುತ್ತಾರೆ. ಇವರ ಗುರುಗಳು ರಾಮರಾವ ಮಹಾರಾಜರು ಲಂಬಾಣಿಗರಲ್ಲಿ ಹೊಸ ಕ್ರಾಂತಿಯನ್ನುಂಟು ಮಾಡಿದ್ದಾರೆ. ಅವರ ದುರ್ವ್ಯಸನಗಳನ್ನು ಬಿಡಿಸಿದ್ದಾರೆ. ಇವರ ಪ್ರಭಾವದಿಂದ ಲಂಬಾಣಿಗರು ನಾಗರಿಕ ವ್ಯಕ್ತಿಗಳಾಗಿ ಮಾರ್ಪಡುತ್ತಿದ್ದರೆಂದು ಇವರ ಲೇಖನದಲ್ಲಿ ಚಿತ್ರಿಸಲಾಗಿದೆ.

### ೭. ಪ್ರಗತಿಪರ ಗ್ರಾಮ ಬೇಮಲಳಖೇಡ. ೦೬-೦೨-೧೯೮೩.

ಬೀದರ ಜಿಲ್ಲೆಯಲ್ಲಿ ಬೇಮಳಖೇಡ ಗ್ರಾಮವು ಪ್ರಗತಿಪರವಾಗಿದೆ ಎಂದು ಹೇಳಬಹುದು. ಒಂದು ಗ್ರಾಮವು ಪ್ರಗತಿ ಹೊಂದಬೇಕಾದರೆ ಆ ಗ್ರಾಮದ ಬಗ್ಗೆ ಕಾಳಜಿಯುಳ್ಳ ವ್ಯಕ್ತಿ ಇರಬೇಕು. ಅಂತಹ ಪ್ರಭಾವಿ ವ್ಯಕ್ತಿ ಇದ್ದರೆ ಊರಿನ ಜನ ರ ಸಹಕಾರ ಸಿಗುತ್ತದೆ. ಜನರಲ್ಲಿ ಒಕ್ಕಟ್ಟು ಕೂಡ ಇರುತ್ತದೆ. ಜಾತಿಯ ಜಗಳಗಳು ನಾಶವಾಗುತ್ತವೆ. ಜನರಿಗೆ ತಮ್ಮ ಜಾತಿಗಿಂತಲೂ ಗ್ರಾಮದ ಬಗ್ಗೆ ಅಭಿಮಾನವಿರುತ್ತದೆ. ಈ

ಗ್ರಾಮದಲ್ಲಿ ವಿರುಪಾಕ್ಷಪ್ಪ ಮಾಲಿಪಾಟೀಲ ಮಾಡಿದ ಸುಧಾರಣೆಯಿಂದಲೆ ಬೇಮಳಖೇಡ ಗ್ರಾಮವು ಬೀದರ ಜಿಲ್ಲೆಯ ನಕಾಶೆಯಲ್ಲಿ ಎದ್ದು ಕಾಣುತ್ತದೆ. ಸರಕಾರದಿಂದ ದೊರೆಯುವ ಎಲ್ಲ ಸೌಲಭ್ಯಗಳು ವಿರುಪಾಕ್ಷಪ್ಪ ಪಾಟೀಲರು ಖಾದರ ಅಲಿಖಾನ ಡಿ.ಸಿ.ರವರಿಂದ ಪಡೆದಿದ್ದರು. ಇಲ್ಲಿ ಪಶು ಚಿಕಿತ್ಸಾಲಯ, ಕಾಲೇಜು, ಹೈಸ್ಕೂಲ, ಗ್ರಂಥಾಲಯ, ಪಂಚಾಯತ ಕಟ್ಟಡ ಮುಂತಾದ ಸರಕಾರಿ ಕಟ್ಟಡಗಳಿವೆ. ಈ ಊರಿನಲ್ಲಿ ಅಸ್ಪೃಶ್ಯತೆ ಹೊಡೆದೋಡಿಸುವಲ್ಲಿ ವಿರೂಪಾಕ್ಷಪ್ಪ ಮಾಲಿಪಾಟೀಲರು ಉರಿಲಿಂಗ ಪದ್ದಿ ಮಠದ ಶ್ರೀ.ಶಿ. ಜಿ.ಸ್ವಾಮಿಗಳು ಪ್ರಯತ್ನಿಸಿದ್ದಾರೆ. ಮಹಿಳೆಯ ಶಿಕ್ಷಣ ಮಟ್ಟ ಹೆಚ್ಚಿದೆ ಸುಶಿಕ್ಷಿತರ ಸಂಖ್ಯೆಯು ಹೆಚ್ಚಾಗಿದೆ. ಸಾರಿಗೆ ಸಂಪರ್ಕ ಹೊಂದಿದೆ.

### ೮. ಚಂದ್ರಂಪಳ್ಳಿ ರೈತರ ಬದುಕಿನಲ್ಲಿ ಸಂತೃಪ್ತಿ ತಂದ ಯೋಜನೆ. ೨೪-೦೪-೧೯೮೩

ಬೀದರ ಜಿಲ್ಲೆಗೆ ಹೊಂದಿಕೊಂಡಿರುವ ಚಿಂಚೋಳಿ ತಾಲೂಕಿನ ಚಂದ್ರಂಪಳ್ಳಿ ಜಲಾಶಯ ನಿರ್ಮಾಣವಾಗಿ ೩೬ ವರ್ಷಗಳಾದವು. ೧೯೬೬ ರಲ್ಲಿ ಪ್ರಾರಂಭವಾದ ಆಣೆಕಟ್ಟು ೧೯೭೨ ರಲ್ಲಿ ಮುಕ್ತಾಯಗೊಂಡಿತ್ತು. ಕರ್ನಾಟಕ ರಾಜ್ಯದ ಜನಪ್ರಿಯ ಮುಖ್ಯಮಂತ್ರಿಗಳು ಹಾಗು ಉತ್ತಮ ಆಡಳಿತಗಾರರೆಂದು ಹೆಸರು ಪಡೆದವರಾದ ವೀರೇಂದ್ರ ಪಾಟೀಲರ ಭಾವಂದಿರಾದ ರಾಚಪ್ಪಾ ಭಂಡಾರಿ ಇಂಜಿನೀಯರರವರ ತಲೆಗೆ ಹೊಳೆದಿತ್ತು. ವ್ಯರ್ಥವಾಗಿ ಹರಿದು ಹೋಗುತ್ತಿರುವ ಮುಲ್ಲಾ ಮಾರಿ ನದಿಯ ಉಪನದಿಯಾದ ಸರನಾಲಾ ಹಳ್ಳವನ್ನು ತಡೆದು ಆಣೆಕಟ್ಟು ನಿರ್ಮಿಸಬೇಕೆಂದು ಸರಕಾರಕ್ಕೆ ಮನವಿ ಮಾಡಿದ್ದರು .ಆದರೆ ಅದು ಅಂದು ಫಲಿಸದೆ ವೀರೇಂದ್ರ ಪಾಟೀಲರು ಮುಖ್ಯ ಮಂತ್ರಿಗಳಾದ ಬಳಿಕ ಫಲಿಸಿತು. ವಿಶಾಲವಾದ ಈ ಜಲಾಶಯ ತುಂಬಿದಾಗ ೯೦ ಅಡಿಗಳಷ್ಟು ಆಳವಾಗಿ ನೀರು ನಿಲ್ಲುತ್ತವೆ ಸುತ್ತಲೆಲ್ಲ ಬೆಟ್ಟಗಳ ಸಾಲು, ಆಳವಾದ ಕಂದಕದಲ್ಲಿ ಈ ಜಲಾಶಯವು ಮಾನಸ ಸರೋವರದಂತೆ ಕಂಗೊಳಿಸುತ್ತದೆ. ಚಿಂಚೋಳಿ ತಾಲೂಕಿನ ಅನೇಕ ಹಳ್ಳಿಗಳ ರೈತರು ಇದರಿಂದ ಲಾಭಪಡೆದು ತಮ್ಮ ಬಡತನವನ್ನು ನೀಗಿಸಿಕೊಂಡಿದ್ದಾರೆ. ಬರಪೀಡಿತವಾದ ಈ ಪ್ರದೇಶವು ಇಂದು ನಳ ನಳಿಸುವ ಸುಂದರ ಬನವಾಗಿ ಮಾರ್ಪಟ್ಟಿದೆ. ಜನತೆಯಲ್ಲಿ ಆರ್ಥಿಕ ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಜಾಗೃತಿಯಾಗಿದೆ. ಪ್ರವಾಸಿಗರ ಸ್ವರ್ಗ ಎನಿಸಿದ ಈ ಪ್ರಕೃತಿ ಸೌಂದರ್ಯ ಸವಿಯಲು ಬೀದರ ಜಿಲ್ಲೆ, ಗುಲಬರ್ಗಾ ಜಿಲ್ಲೆ ಆಂಧ್ರ ಪ್ರದೇಶದಿಂದ ವಿದ್ಯಾರ್ಥಿಗಳು ಶೈಕ್ಷಣಿಕ ಪ್ರವಾಸ ಕೈಗೊಳ್ಳುತ್ತಾರೆ.

### ೯. ಆದರ್ಶ ಪ್ರಾಧ್ಯಾಪಕ ಡಾ. ಮಾಣಿಕರಾವ ಧನಶ್ರೀ. ೨೧-೦೩-೧೯೮೬.

ಮಾಣಿಕರಾವ ಧನಶ್ರೀಯವರು ಸಜ್ಜನರು. ಇವರ ಸಹವಾಸದ ಫಲವಾಗಿ ಲೇಖಕರು ಸಾಹಿತ್ಯ ಸೇವೆ ಕೈಕೊಂಡರು. ಪ್ರಾಥಮಿಕ ಶಾಲಾ ಶಿಕ್ಷಕರಾದ ಇವರು ತಮ್ಮ ಶಿಕ್ಷಣವನ್ನ ಮುಂದುವರೆಸಿ ಬಿ.ಎ; ಎಂ.ಎ. ಪದವಿಧರರಾಗಿ ಪಿಎಚ್.ಡಿ. ಪದವಿ ಗಿಟ್ಟಿಸಿದ್ದರು. ಬಸವಕಲ್ಯಾಣದಲ್ಲಿ ಪ್ರಾಧ್ಯಾಪಕರಾಗಿರುವಾಗ ತಾಲೂಕು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಇವರು ಗೈದ ಕನ್ನಡ ಸೇವೆ ಚಿರಸ್ಮರಣೀಯವಾಗಿದೆ. ಇವರ ವ್ಯವಸ್ಥಿತ ಕನ್ನಡ ಚಟವಟಿಕೆಗಳು ಕಲ್ಯಾಣದ ಜನರ ಮನಸಸ್ಸನ್ನು

ಆಕರ್ಷಿಸಿದವು. ಇವರು ಗ್ರಂಥಕಾರರಾಗಿದ್ದಾರೆ. ಹಳೆಯ ತಲೆಮಾರಿನ ಕವಿಗಳೆಂದರೆ ಅಚ್ಚುಮೆಚ್ಚು ಜೀವನದಲ್ಲಿ ಜಿಗುಪ್ಸೆಗೊಂಡಾಗ ವಚನ ಸಾಹಿತ್ಯದಿಂದ ಸಮಾಧಾನ ಪಡೆಯುತ್ತಾರೆ.

**೧೦. ಪ್ರತಿಭಾವಂತ ಪ್ರಾಧ್ಯಾಪಕ ಕೆ.ಎಸ್. ಮೂರ್ತಿ. ೧೨-೦೮-೧೯೯೪**

ಕೆ.ಎಸ್. ಮೂರ್ತಿಯವರು ಬಳ್ಳಾರಿ ಜಿಲ್ಲೆಯ ಹೊಸಪೇಟ ತಾಲೂಕಿನ ಕಂಪ್ಲಿ ಗ್ರಾಮದವರು. ಇವರು ಬೀದರನ ಬಿ.ವಿ.ಬಿ. ಕಾಲೇಜಿಗೆ ಪ್ರಾಣಿಶಾಸ್ತ್ರದ ಉಪನ್ಯಾಸಕರಾಗಿ ೧-೮-೧೯೬೪ ರಂದು ಬಂದರು. ಇವರು ಆದರ್ಶ ಪ್ರಾಧ್ಯಾಪಕರಾಗಿದ್ದರು. ಅವರ ಬೋಧನೆ ವಿದ್ಯಾರ್ಥಿಗಳಲ್ಲಿ ಪ್ರಚೋದಿಸುತ್ತಿದ್ದವು. ಇವರು ಕೇವಲ ಕಾಲೇಜಿನ ಪ್ರಾಧ್ಯಾಪಕರಾಗಿರದೇ ಕನ್ನಡದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಕನ್ನಡ ಮಿತ್ರರ ಸಂಘವು ರಾಮಚಂದ್ರರಿಂದ ಪೊಲಿಟೆಕ್ನಿಕ್ ಕಾಲೇಜಿನ ಪ್ರಾಚಾರ್ಯರಿಂದ ಸ್ಥಾಪಿತವಾಗಿತ್ತು. ಕೆ.ಎಸ್.ಮೂರ್ತಿಯವರು ಇದರ ಪದಾಧಿಕಾರಿಗಳಾಗಿ ನೃತ್ಯ ನಾಟಕ ಉಪನ್ಯಾಸ ಮುಂತಾದ ಚಟುವಟಿಕೆಗಳಿಗೆ ಚಾಲನೆ ಕೊಡುವವರಾಗಿದ್ದರು. ಹಣಮಂತಪ್ಪಾ ಪಾಟೀಲರ ಕನ್ನಡ ಸಾಹಿತ್ಯ ಪರಿಷತ್ತಿನ ಕಾಲಾವಧಿಯಲ್ಲಿ ಅವರ ಭುಜಕ್ಕೆ ಭುಜ ಕೊಟ್ಟು ಜಿಲ್ಲಾ ಸಾಹಿತ್ಯ ಸಮ್ಮೇಳನ ಮಹಿಳಾ ವರ್ಷ, ಜಾನಪದ ಕಲಾ ಮೇಳ ಮುಂತಾದ ಸಮ್ಮೇಳನಗಳಲ್ಲೂ ಮುಖ್ಯ ಪಾತ್ರ ವಹಿಸಿ ಯಶಸ್ಸು ಗೊಳಿಸಿದ್ದರು. ಮೂರನೇ ಜಿಲ್ಲಾ ಕನ್ನಡ ಸಮ್ಮೇಳನ ಪುಣ್ಯಶೆಟ್ಟಿ ಅವರ ಕಾಲಾವಧಿಯಲ್ಲಿ ಜರುಗಿದಾಗ ಕೋಶಾಧ್ಯಕ್ಷರಾಗಿ ಹಗಲಿರುಳು ಸಮ್ಮೇಳನ ಯಶಸ್ಸಿಗೊಳಿಸಲು ದುಡಿದರು. ಇವರಿಗೆ ಕುವೆಂಪು ಕನ್ನಡ ಸಂಘದ ವತಿಯಿಂದ ಸನ್ಮಾನಿಸಿ ಗೌರವಿಸಲಾಗಿತ್ತು. ಕುಟುಂಬ ಯೋಜನೆ, ಪರಿಸರ ರಕ್ಷಣೆ, ಅರಣ್ಯ ರಕ್ಷಣೆಗಳ ಬಗ್ಗೆ ಉಪನ್ಯಾಸ ನೀಡಿ ಜನಪ್ರೀಯತೆ ಗಳಿಸಿದ್ದರು. ರಾಘವೇಂದ್ರ ಮಠದ ಸ್ಥಾಪನೆ, ರಾಘವೇಂದ್ರ ಶಿಕ್ಷಣ ಸಂಸ್ಥೆ ಸ್ಥಾಪಿಸಿ ಅಂತ್ಯದವರೆಗೂ ಅಧ್ಯಕ್ಷರಾಗಿದ್ದರು. ದಾಸ ಸಾಹಿತ್ಯದ ಮೇಲೆ ಅವರಿಗೆ ಪ್ರಭುತ್ವವಿತ್ತು. ಅಜಾತ ಶತ್ರು ಎಂದು ಹೆಸರುವಾಸಿಯಾಗಿದ್ದರು. ಆಗಸ್ಟ ಮೂರು ೧೯೯೪ ರಲ್ಲಿ ಮರಣವನ್ನಪ್ಪಿದರು.

**೧೧. ಕಲ್ಯಾಣರಾವ ಮೋಳಕೇರಿ**

ಕಲ್ಯಾಣರಾವ ಮೊಳಕೇರಿಯವರು ಜನಿಸಿದ್ದು ಭಾಲ್ಕಿ ತಾಲೂಕಿನ ಕಣಜಿ ಎಂಬ ಚಿಕ್ಕ ಹಳ್ಳಿಯಲ್ಲಿ. ಅವರ ಕಾಲೇಜು ಅಭ್ಯಾಸ ಬೀದರ ಭೂಮರೆಡ್ಡಿ ಕಾಲೇಜಿನಲ್ಲಿ ಆಯಿತು. ಬಿ.ಟಿ.ಸಾಸನೂರರ ಶಿಷ್ಯರಲ್ಲಿ ಇವರೂ ಒಬ್ಬರು. ಗುಲ್ಬರ್ಗ ಕಾನೂನು ಕಾಲೇಜಿನಲ್ಲಿ ಅಭ್ಯಾಸ ಮಾಡಿ ವಕೀಲಿ ವೃತ್ತಿ ಕೈಕೊಂಡಿದ್ದರು. ಭಾಲ್ಕಿ ತಾಲೂಕಿನಿಂದ ಚುಣಾವಣೆಯಲ್ಲಿ ಜನತಾ ಪಕ್ಷದ ಉಮೇದುವಾರರಾಗಿ ಆಯ್ಕೆಯಾಗಿದ್ದರು. ಎಂತಹ ಪ್ರಸಂಗ ಬಂದರು ಇವರು ಪಕ್ಷಾಂತರ ಮಾಡಿದವರಲ್ಲ. ಕನ್ನಡ ನುಡಿಯ ಬಗ್ಗೆ ಅಪಾರವಾದ ಪ್ರೇಮ. ಇವರು ಮಾತಾಡಲು ತೊಡಗಿದರೆ ಜನಪದ ಸಾಹಿತ್ಯವೇ ಅವರ ನಾಲಿಗೆಯ ಮೇಲೆ ನಲಿದಾಡುತ್ತಿತ್ತು. ಜನರು ಬಹಳ ಕುತೂಹಲರಾಗಿ ಭಾಷಣ ಕೇಳುತ್ತಿದ್ದರು. ಶ್ರೀಸಾಮಾನ್ಯರ ಸುಖ ದುಃಖದಲ್ಲಿ ಭಾಗಿಯಾಗುತ್ತಿದ್ದರಲ್ಲದೆ ಜನರ ಸಮಸ್ಯೆಗಳನ್ನು ಲೀಲಾಜಾಲವಾಗಿ ಪರಿಹರಿಸುತ್ತಿದ್ದರು.

ಮೂರನೇ ಜಿಲ್ಲಾ ಸಾಹಿತ್ಯ ಸಮ್ಮೇಳನಕ್ಕೆ ಜಿಲ್ಲಾ ಪರಿಷತ್ತು ಹಣ ಕೊಡುವವರೆಗೆ ನೀರು ಸಹಿತ ಕುಡಿಯವುದಿಲ್ಲ ಎಂದು ಪಣ ತೊಟ್ಟಿದ್ದರು. ಇವರ ಆಗ್ರಹದ ಮೇರೆಗೆ ಜಿಲ್ಲಾ ಪರಿಷತ್ತು ಹಣ ಮಂಜೂರು ಮಾಡಿತ್ತು. ಇವರು ಅಪಘಾತದಲ್ಲಿ ಸಾವಿಗೀಡಾದರು. ಈ ದುರಂತವನ್ನು ಕೇಳಿ ಪ್ರಸಿದ್ಧ ರಾಜಕಾರಣಿಯಾದ ಮದ್ರಾಸಿನ ಸುಬ್ರಹ್ಮಣ್ಯ ಸ್ವಾಮಿಯವರು ಆಗಮಿಸಿ ಮೃತರಿಗೆ ಶ್ರದ್ಧಾಂಜಲಿ ಅರ್ಪಿಸಿದ್ದರು.

೧೨. ಮೀನಕೇರಿಯ ಗಿರಿಯಪ್ಪ ಗೌಡರು. ಜನದನಿ-೨೫-೦೮-೧೯೯೧

ಗಿರಿಯಪ್ಪ ಗೌಡರು ಬೀದರ ಸರಕಾರಿ ಆಸ್ಪತ್ರೆಯಲ್ಲೆ ಸಾವನ್ನಪ್ಪಿದಾಗ ಅವರಿಗೆ ೯೦ ವರ್ಷಗಳಾಗಿದ್ದವು. ಇವರು ಹಳೆಯ ತಲೆಮಾರಿನ ವ್ಯಕ್ತಿಗಳು. ಸ್ವಾತಂತ್ರ್ಯ ಪೂರ್ವದಲ್ಲಿ ನಿಜಾಮ ಸರ್ಕಾರದ ವಿರೋಧವಾಗಿ ಹೋರಾಡಿದವರು. ಸ್ವತಂತ್ರ ಹೋರಾಟಗಾರರೆಂದು ಪೆನ್ಶನ ಕೊಡಲು ಬಂದಾಗ ನಿರಾಕರಿಸಿದರು. ರಜಾಕಾರರಿಂದ ಪೀಡಿತರಾದ ಜನರನ್ನು ಬೆನ್ನಿಗೆ ಹಾಕಿಕೊಂಡು ರಕ್ಷಿಸಿದವರು. ದೇಶ ಸ್ವಾತಂತ್ರವಾದ ಬಳಿಕ ತಮ್ಮ ಗ್ರಾಮದ ಸರಪಂಚರಾಗಿ ೨೫ ವರ್ಷ ಗ್ರಾಮದ ಅಭಿವೃದ್ಧಿಗಾಗಿ ಶ್ರೀ ಗಂಧದಂತೆ ಜೀವನ ಸವೆಸಿದ್ದಾರೆ. ಊರಿನಲ್ಲಿ ಪಂಚಾಯತ ಕಾರ್ಯಾಲಯ, ಹಣಮಂತದೇವರ ಗುಡಿ ನಿರ್ಮಾಣ, ಮೀನಕೇರಿಯಿಂದ ರಾಷ್ಟ್ರೀಯ ಹೆದ್ದಾರಿಯ ತನಕ ಮೂರು ಕಿ.ಮಿ.ರಸ್ತೆ ನಿರ್ಮಾಣ ಮತ್ತು ಊರಿನಲ್ಲಿ ಗ್ರಂಥಾಲಯ, ಶಾಲೆ, ಸಹಕಾರಿ ಬ್ಯಾಂಕ, ಕಾಲುವೆಗಳು ಮುಂತಾದ ಅಭಿವೃಧಿ ಕೆಲಸಗಳು ಇವರು ಮಾಡಿದ್ದಾರೆ. ಮನೆಯ ಕೆಲಸಗಳನ್ನು ಮಾಡಿದವರೇ ಅಲ್ಲ. ಸದಾ ಗ್ರಾಮದ ಚಿಂತನೆ. ಇವರ ಪ್ರಾಮಾಣಿಕತನದ ಬಗ್ಗೆ ಅನೇಕ ದೃಷ್ಟಾಂತಗಳು ಇವೆ. ಖಾದಿ ಬಟ್ಟೆ, ತಲೆಯ ಮೇಲೆ ಗಾಂಧಿ ಟೊಪ್ಪಿಗೆ ಎತ್ತರವಾದ ನಿಲವು. ನೋಡಿದರೆ ಗಾಂಧೀಜಿಯವರನ್ನು ಕಂಡೆ ಆಗುತ್ತದೆ ಎಂದು ಹೇಳಿದ್ದಾರೆ. ಇವರ ಹೊರಗು ಬಿಳಪು. ಒಳಗೂ ಬಿಳುಪು. ಯಾರ ಮನಸ್ಸನ್ನು ನೋಯಿಸಿದವರಲ್ಲ. ಹೆಸರಿಗೆ ತಕ್ಕಂತೆ ಗಿರಿಯಪ್ಪ ಎತ್ತರ ಇವರ ವ್ಯಕ್ತಿತ್ವವು ಯಾರಿಂದ ಸೇವೆ ತೆಗೆದುಕೊಂಡವರಲ್ಲ. ಅವರು ಕೊನೆಯುಸಿರೆಳೆಯುವಾಗ ಬಸವಣ್ಣನವರ ವಚನ 'ನೀನೊಲಿದರೆ ಕೊರಡು ಕೊನರುವುದಯ್ಯ' ಎಂದು ಹೇಳುತ್ತಿರುವಾಗ ಅವರ ಪ್ರಾಣವೇ ಹಾರಿಹೋಯಿತು.

ವ್ಯಕ್ತಿಗಳ ವಯಕ್ತಿಕ ಜೀವನ ಮತ್ತು ಅವರು ಸಾಮಾಜಿಕವಾಗಿ ಮಾಡಿದ ಸೇವೆ, ಆದರ್ಶ ಪ್ರಾಮಾಣಿಕವಾಗಿರುತ್ತವೆ. ಇಂತಹ ವ್ಯಕ್ತಿಗಳನ್ನು ಕುರಿತು ಬರೆಯದೆ ಇದ್ದರೆ ನಾಡಿನಲ್ಲಿ ಒಳ್ಳೆಯವರು ಕಾಣುವುದು ದುರ್ಲಭವಾಗುತ್ತದೆ. ಮಾದರಿಯಾದ ಇವರ ಜೀವನವು ಸರ್ವರಿಗೂ ದಾರಿದೀಪವಾಗಿರುತ್ತದೆ.

## ಇತರ ಲೇಖನಗಳು

**ಪ್ರಕಟಿತ :**

**೧) ಶರಣ ಸಾಹಿತ್ಯಕ್ಕೆ ಬೀದರ ಜಿಲ್ಲೆಯ ಕೊಡುಗೆ :**

ಬಸವ ಸಾಗರ ಎಂಬ ಸ್ಮರಣ ಗ್ರಂಥವು ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿನ ಕೊಡೇಕಲ್

ಅವರು ಪ್ರಕಟಿಸಿದ್ದಾರೆ. ಈ ಗ್ರಂಥದ ಸಂಪಾದಕರು ಡಾ. ಈಶ್ವರಯ್ಯಾ ಮಠ. ಕಲ್ಯಾಣ ಕಲ್ಯಾಣ ಕರ್ನಾಟಕ ಪ್ರಥಮ ಶರಣ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಈ ಗ್ರಂಥವು ಪ್ರಕಾಟವಾಗಿದೆ. ಪಂಚಾಕ್ಷರಿ ಪುಣ್ಯಶೆಟ್ಟಿಯವರು 'ಶರಣ ಸಾಹಿತ್ಯಕ್ಕೆ ಬೀದರ ಜಿಲ್ಲೆಯ ಕೊಡುಗೆ' ಎಂಬ ವಿಷಯದ ಮೇಲೆ ಒಂದು ಲೇಖನ ಬರೆದಿದ್ದಾರೆ. ಲೇಖನದ ವಿವೇಚನೆಯನ್ನು ಬರೆಯಲಾಗಿದೆ.

ವಚನ ಸಾಹಿತ್ಯವು ಸೃಷ್ಟಿಯಾದುದು ಕಲ್ಯಾಣದ ಅನುಭವ ಮಂಟಪದಲ್ಲಿ. ಪ್ರಸ್ತುತ ಲೇಖನವು ಬೀದರ ಜಿಲ್ಲೆಯಲ್ಲಿ ಜನ್ಮತಳೆದ ವಚನಕಾರರನ್ನೇ ಮಾತ್ರ ಈ ಲೇಖನದಲ್ಲಿ ಉಲ್ಲೇಖಿಸಲಾಗಿದ.

**ಕೇತಲದೇವಿ** : ಕುಂಬಾರ ಗುಂಡಯ್ಯ ಶರಣರು ಬೀದರ ಜಿಲ್ಲೆಯ ಭಾಲ್ಕಿಯವರು. ಗುಂಡಯ್ಯನು ಅಸಾಮಾನ್ಯ ದೈವಿಭಕ್ತನಾಗಿದ್ದಾನೆಂದು, ತನ್ನೊಡನೆ ಶಿವನನ್ನು ಕುಣಿಸಿದ್ದಾನೆಂದುಹರಿಹರ ಕವಿ ಹೃದಯಂಗಮವಾಗಿ ಚಿತ್ರಿಸಿದ್ದಾನೆ. ಈತನ ಹೆಂಡತಿಯ ಹೆಸರು ಕೇತಲದೇವಿ. ಇವಳು ಮಹಾಶಿವಶರಣೆಯಾಗಿದ್ದಳೆಂದು ಅಂದಿನ ಕವಿಗಳು ಬರೆದಿದ್ದಾರೆ. ಅವಳು ಪತಿಯ ಸಂಗಡ ಗಡಿಗೆ ಮಾಡುವ ಕಾಯಕದಲ್ಲಿ ಸಹಕರಿಸುತ್ತಿದ್ದಳೆಂದು ಆಕೆಯು ಬರೆದ ವಚನದ ಆಧಾರದಿಂದ ತಿಳಿದು ಬರುತ್ತದೆ. 'ಹದ ಮಣ್ಣಲ್ಲದೆ ಮಡಿಕೆಯಾಗದು. ವ್ರತಹೀನನ ಬೆರೆಯಲಾಗದು.' ಹೀಗೆ ತಾನು ಕೈಗೊಂಡ ದೃಷ್ಟಾಂತಗಳು ಈಕೆಯ ವಚನದಲ್ಲಿ ಬಂದಿವೆ.

**ಲದ್ದೆಯ ಸೋಮಣ್ಣ** : ಲದ್ದೆಯ ಸೋಮಣ್ಣನು ಬೀದರ ಜಿಲ್ಲೆಯ ಭಾಲ್ಕಿ ತಾಲೂಕಿನ ಲದ್ದೆ ಎಂಬ ಗ್ರಾಮದವನು. ಈಗ ಇದಕ್ಕೆ ಲಾಧಾ ಎಂದು ಕರೆಯುತ್ತಾರೆ. ಈತನು ಹುಲ್ಲು ಮಾರುವ ಕಾಯಕ ಕೈಗೊಂಡಿದ್ದನು. ಇವನ ಭಕ್ತಿಯನ್ನು ಶಿವನು ಪರೀಕ್ಷಿಸಿದ ಒಂದು ಪವಾಡ ಬರುತ್ತದೆ. ಇವನು ಬರೆದ ಒಂದೇ ಒಂದು ವಚನ ದೊರೆತಿದೆ. ಇವರ ಅಂಕಿತನಾಮ ಭಾಪು ಲದ್ದೆಯ ಸೋಮ.

**ಬಹುರೂಪಿ ಚೌಡಯ್ಯ** : ಬೀದರ ತಾಲೂಕಿನ ರೇಕುಳಗಿ ಗ್ರಾಮವು ಚೌಡಯ್ಯನಿಗೆ ಜನ್ಮ ಕೊಟ್ಟ ಊರು. ಇವರು ಬ್ರಾಹ್ಮಣರಾಗಿದ್ದರು. ರೇಕನಾಥಾಚಾರ್ಯರೆಂಬ ಶರಣರಿಂದ ವೀರಶೈವ ದೀಕ್ಷೆಯನ್ನು ಪಡೆದಿದ್ದರು. ಬಸವಾದಿ ಶರಣರ ಸಂಗದಲ್ಲಿ ಕಾಲ ಕಳೆದರು. ಇವರು ವಚನಕಾರರಾಗಿದ್ದರು. ಅವರ ಒಂದು ವಚನದ ತುಣಕು ಹೀಗಿದೆ-

ಆಡುವಡೆ ಸದಾಚಾರಿಗಳ ಕೂಡೆ ಆಡುವುದು.
ನುಡಿಯೊಡೆ ಜಂಗಮ ಪ್ರೇಮಿಯ ಕೂಡೆ ನುಡಿಯುದು..........

**ಗಟ್ಟಿವಾಳಯ್ಯ** : ಬಸವಕಲ್ಯಾಣದ ಹಂದ್ರಾಳ ಊರಿನವರೆಂದು ಸಂಶೋಧಕರ ಅಭಿಪ್ರಾಯವಾಗಿದೆ. ಕಾರಣವೇನೆಂದರೆ ಮತ್ತೆಲ್ಲಿಯೂ ಇವರು ಜನ್ಮತಾಳಿದ ಉಲ್ಲೇಖಗಳು ಇಲ್ಲ. ಹಂದ್ರಾಳದಲ್ಲಿ ಗಟ್ಟಿವಾಳಯ್ಯನವರ ಗವಿ ಇದೆ. ಇಲ್ಲಿ ದಾಸೋಹ ಭಜನೆ ಮಾಡುತ್ತಾರೆ. ಇವರ ೧೫೦ ವಚನಗಳು ಉಪಲಬ್ಧವಾಗಿವೆ. ಅಂಬಿಗರ ಚೌಡಯ್ಯನ ವಚನದಂತೆ ನೇರವಾಗಿವೆ. ಇವರ ಅಂಕಿತನಾಮ ಚಿಕ್ಕಯ್ಯ ಪ್ರಿಯ ಸಿದ್ದಲಿಂಗ ಇಲ್ಲ ಇಲ್ಲ.

**ಮೇದಾರ ಕೇತಯ್ಯ:** ಬೀದರ ಪಕ್ಕದಲ್ಲಿರುವ ಚಿದ್ರಿ ಗ್ರಾಮದವರೆಂಬುದು ಕೆಲವು ಆಧಾರಗಳಿಂದ ಗುರುತಿಸಬಹುದಾಗಿದೆ. ಚಿದ್ರಿಯಲ್ಲಿ ಇವರ ಚಿಕ್ಕದಾದ ಗುಡಿ ಇದೆ. ಮೇದಾರರು ತಮ್ಮ ಮನೆ ದೇವರೆಂದು ಕಾಲಾನುಕಾಲದಿಂದ ಪೂಜಿಸುತ್ತಾ ಬಂದಿದ್ದಾರೆ. ಇವರು ವಚನಕಾರರಾಗಿದ್ದರು. ಹದಿನಾಲ್ಕು ವಚನಗಳು ದೊರಕಿವೆ. ಗವರೇಶ್ವರ ಎಂಬುದು ಇವರ ಅಂಕಿತನಾಮ.

**೨. ಪೂಜ್ಯ ಬಸವಲಿಂಗ ಪಟ್ಟದ್ದೇವರ-ಜೀವನ ಸಾಧನೆ.**

ಈ ಲೇಖನವು ಚನ್ನಬಸವ ಕಲ್ಯಾಣ ಸ್ಮರಣ ಸಂಚಿಕೆಯಲ್ಲಿ ಪ್ರಕಟವಾಗಿದೆ. ಅಖಿತ ಭಾರತ ಒಂಬತ್ತನೇ ಶರಣ ಸಾಹಿತ್ಯ ಸಮ್ಮೇಳನ ಭಾಲ್ಕಿ ಮತ್ತು ಲಿಂ.ಪೂಜ್ಯ ಡಾ. ಚನ್ನಬಸವ ಪಟ್ಟದ್ದೇವರ ಏಳನೇ ಸ್ಮರಣೋತ್ಸವ ಸಂದರ್ಭದಲ್ಲಿ ಪ್ರಕಟವಾಗಿದೆ.

ಭಾಲ್ಕಿ ಹಿರೇಮಠದ ಪೂಜ್ಯ ಬಸವಲಿಂಗ ಪಟ್ಟದ್ದೇವರ ಪರಿಚಯ ಮಾಡುತ್ತಾ ಪಂಚಾಕ್ಷರಿಯವರು ಭಾಲ್ಕಿ ಹಿರೇಮಠದ ಪಟ್ಟದೇವರು ಹೊರಗೆ ಮಾತ್ರ ಶ್ರೀಸಾಮಾನ್ಯರಂತೆ ಕಂಡು ಬಂದರು ಬೂದಿ ಮುಚ್ಚಿದ ಕೆಂಡದಂತೆ ಒಳಗೆ ಅದ್ಭುತ ವ್ಯಕ್ತಿತ್ವ ಹೊಂದಿದವರಾಗಿದ್ದಾರೆ ಎಂದು ಹೇಳಿದ್ದಾರೆ. ಇವರು ಜನ್ಮ ವೆತ್ತಿದ್ದು ಆಂಧ್ರ ಪ್ರದೇಶದ ನಾರಾಯಣಖೇಡ ತಾಲೂಕಿನ ನಾಗೂರ (ಬಿ) ಎಂಬ ಗ್ರಾಮದಲ್ಲಿ. ಇವರು ಎಂ.ಎ. ಪದವಿಧರರಾಗಿದ್ದಾರೆ. ೧೯೮೫ ರಲ್ಲಿ ಡಾ.ಚನ್ನಬಸವ ಪಟ್ಟದ್ದೇವರು ಇವರನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಿಕೊಂಡಿದ್ದರು. ಇವರು ಮೂನ್ನೂರು ಬಡ ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದ ಹಾಗೂ ಉಚಿತ ಶಿಕ್ಷಣ ಒದಗಿಸಿದ್ದಾರೆ. ಇವರು ಸ್ಥಾಪಿಸಿದ ಚನ್ನಬಸವೇಶ್ವರ ಗುರುಕುಲವು ಇಂದು ನಾಡಿನ ಗಮನವನ್ನು ತನ್ನೆಡೆಗೆ ಸೆಳೆದಿದೆ. ಇಲ್ಲಿ ವಿದ್ಯಾಭ್ಯಾಸಕ್ಕಾಗಿ ಬೇರೆ ಬೇರೆ ಜಿಲ್ಲೆಗಳಿಂದ ಈ ಮಾದರಿಯ ಗುರುಕುಲಕ್ಕೆ ವ್ಯಾಸಂಗ ಮಾಡಲು ಬರುತ್ತಾರೆ. ಇವರು ಸಾಹಿತಿಗಳಾಗಿದ್ದಾರೆ. ಪುಸ್ತಕ ಪ್ರೇಮಿಗಳಾಗಿದ್ದಾರೆ. ಪ್ರತಿ ವರ್ಷ ಪಟ್ಟದ್ದೇವರ ಸ್ಮರಣೋತ್ಸವ ಕಾಲದಲ್ಲಿ ಮರಾಠಿ ಭಾಷೆಯ ಶರಣ ಸಾಹಿತ್ಯ ಗ್ರಂಥಗಳ ಉತ್ತಮ ಸಾಹಿತ್ಯ ರಚಿಸಿದ ಮಕ್ಕಳಿಗೆ ಖ್ಯಾತ ಸಮಾಜ ಸೇವಕರಿಗೆ, ಜಿಲ್ಲಾ ಮಟ್ಟದ ಉತ್ತಮ ಲೇಖಕರಿಗೆ, ಹಾಗೂ ಉತ್ತಮ ಗಾಯಕರಿಗೆ ೫೦೦೦ ರೂ. ಗಳನ್ನು ಹಾಗೂ ಪ್ರಶಸ್ತಿ ಪತ್ರವನ್ನು ನೀಡಿ ಸತ್ಕರಿಸುತ್ತಾರೆ.

**೩. ಬೀದರ ಜಿಲ್ಲಾ ಸಾಹಿತ್ಯ ಪರಿಷತ್ತು ನಡೆದು ಬಂದ ದಾರಿ.**

ಈ ಲೇಖನವು ಬಸಪ್ರಭೆ ಎಂಬ ಸವಿ ಸಂಚಿಕೆಯಲ್ಲಿ ಪ್ರಕಟವಾಗಿದೆ ೭೨ ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಪ್ರಕಟವಾಗಿದೆ. ಇದು ನಡೆದದ್ದು ಜನೇವರಿ ೨೬,೨೭,೨೮ ೨೦೦೬ ರಲ್ಲಿ ಇದರ ಗೌರವ ಸಂಪಾದಕರಾದ ವೀರೇಂದ್ರ ಸಿಂಪಿ ಮತ್ತು ಪ್ರಧಾನ ಸಂಪಾದಕರು ಜಗನ್ನಾಥ ಹೆಬ್ಬಾಳೆಯವರು.

ಅಖಿಲ ಭಾರತ ಮಟ್ಟದ ೪೧ ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ೧೯೬೦ರಲ್ಲಿ ಬೀದರನಲ್ಲಿ ಜರುಗಿತ್ತು. ಸಂಶೋಧಕರಾದ ಡಿ. ಎಲ್. ನರಸಿಂಹಚಾರ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ೧೯೭೦ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಕೇಂದ್ರದ ಅಧ್ಯಕ್ಷರಾಗಿದ್ದ ಜಿ. ನಾರಾಯಣರು ಹಣಮಂತಪ್ಪಾ ಪಾಟೀಲರನ್ನು ಜಿಲ್ಲಾ ಘಟಕದ ಅಧ್ಯಕ್ಷರನ್ನಾಗಿ ಮಾಡಿದರು. ಇವರ ಅವಧಿಯಲ್ಲಿ ಜಿಲ್ಲಾ ಸಾಹಿತ್ಯ ಸಮ್ಮೇಳನ ಜಿ. ವೆಂಕಟ ಸುಬ್ಬಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಪಂಚಾಕ್ಷರಿ ಪುಣ್ಯಶೆಟ್ಟಿಯವರು ೧೯೭೯ ರಲ್ಲಿ ಬೀದರ ಜಿಲ್ಲಾ ಘಟಕದ ಅಧ್ಯಕ್ಷರಾದರು. ಇವರು ಎರಡನೆ ಸಲ ಅಧ್ಯಕ್ಷರಾಗಿ ೧೯೮೯

ರಲ್ಲಿ ಆಯ್ಕೆಯಾದಾಗ ಮೂರನೆ ಜಿಲ್ಲಾ ಸಾಹಿತ್ಯ ಸಮ್ಮೇಳನ ಪ್ರೊ.ವೀರೇಂದ್ರ ಸಿಂಪಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಕಾಶಿನಾಥ ವಿಶ್ವಕರ್ಮ, ಅವರು ಪರಿಷತ್ತಿನ ಅಧ್ಯಕ್ಷರಾಗಿದ್ದರು. ಎನ್. ಸೀತಾರಾಮಪ್ಪನವರು ನಾಲ್ಕನೇ ಅಧ್ಯಕ್ಷರಾಗಿದ್ದರು. ಇವರ ಅವಧಿಯಲ್ಲಿ ೫೭ನೆ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ಹಾ. ಮಾ. ನಾಯಕರು ಅಧ್ಯಕ್ಷರಾಗಿದ್ದರು. ಹಾಗು ಎರಡನೇ ಜಿಲ್ಲಾ ಸಾಹಿತ್ಯ ಸಮ್ಮೇಳನ ಇವರ ಅವಧಿಯಲ್ಲಿ ಕಾದಂಬರಿಕಾರರಾದ ಜಯತೀರ್ಥರಾಜ ಪುರೋಹಿತರವರು ಸಮ್ಮೇಳನದ ಅಧ್ಯಕ್ಷರಾಗಿದ್ದರು. ಬಾಬುರಾವ ವಡ್ಡೆಯವರು ೧೯೯೦ ರಲ್ಲಿ ಪರಿಷತ್ತಿನ ಅಧ್ಯಕ್ಷರಾದರು. ಭಾಲ್ಕಿಯಲ್ಲಿ ಜಿಲ್ಲಾ ಸಮ್ಮೇಳನ ನಡೆಯಿತು. ಇದಕ್ಕೆ ಕಾಶಿನಾಥ ಅಂಬಲಗಿ ಅಧ್ಯಕ್ಷರಾಗಿದ್ದರು. ೧೯೯೩ ರಿಂದ ೧೯೯೮ ರವರೆಗೆ ಜಗನಾಥ ಹೆಬ್ಬಾಳ್ಳೆಯವರು ಪರಿಷತ್ತಿನ ಅಧ್ಯಕ್ಷರಾದರು. ಬಾಲಚಂದ್ರ ಜಯಶೆಟ್ಟಿಯವರು. ಐದನೇ ಜಿಲ್ಲಾ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವರ ಅವಧಿಯಲ್ಲಿ ಆರನೇ ಜಿಲ್ಲಾ ಸಮ್ಮೇಳನ ಜರುಗಿತ್ತು. ಜಿ.ವಿ.ವಿಸಾಜಿಯವರು ಸಮ್ಮೇಳನದ ಅಧ್ಯಕ್ಷರಾಗಿದ್ದರು. ೨೦೦೧ ರಲ್ಲಿ ಸಿದ್ರಾಮಪ್ಪಾ ಮಾಸಿಮಾಡೆಯವರು ಅಧ್ಯಕ್ಷರಾದರು. ಮೂರು ವರ್ಷದ ಅವಧಿಯಲ್ಲಿ ಎರಡು ಸಾಹಿತ್ಯ ಸಮ್ಮೇಳನಗಳು ಜರುಗಿದವು. ಏಳನೇ ಸಮ್ಮೇಳನದ ಅಧ್ಯಕ್ಷೆ ಯಶೋಧಮ್ಮ ಸಿದ್ದಭಟ್ಟೆ ಆಯ್ಕೆಯಾದರೆ ಎಂಟನೇ ಸಮ್ಮೇಳನದ ಅಧ್ಯಕ್ಷರು ದೇಶಾಂಶ ಹುಡುಗಿಯವರಾಗಿದ್ದರು . ೨೦೦೧ ರಲ್ಲಿ ಮತ್ತೆ ಜಗನ್ನಾಥ ಹೆಬ್ಬಾಳೆ ಪುನರಾಯ್ಕೆಯಾದರು. ಈ ಸಂದರ್ಭದಲ್ಲಿ ಶಾಂತರಸರ ಅಧ್ಯಕ್ಷತೆಯಲ್ಲಿ ೭೨ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ಜರುಗಿತು.

**೪. ಜ್ಞಾನ, ಸಜ್ಜನಿಕೆಯ ಸಂಕೇತ - ವೀರೆಂದ್ರ ಸಿಂಪಿ.**

ಈ ಲೇಖನವು ಲಲಿತಾರವಿಂದ ಎಂಬ ಪ್ರೋ ವೀರೇಂದ್ರ ಸಿಂಪಿ ಅವರ ಅಭಿನಂದನ ಗ್ರಂಥದಲ್ಲಿ ಪ್ರಕಟವಾಗಿದೆ. ಪಂಚಾಕ್ಷರಿ ಪುಣ್ಯ ಶೆಟ್ಟಿಯವರು ವೀರೇಂದ್ರ ಸಿಂಪಿಯವರ ಪರಿಚಯ ಸರ್ವಜ್ಞನ ವಚನದೊಂದಿಗೆ ಆರಂಭಿಸುತ್ತಾರೆ.-

ಜ್ಞಾನದಿಂ ಮೇಲಿಲ್ಲ
ಶ್ವಾನದಿಂ ಕೀಳಿಲ್ಲ.....

ಸಿಂಪಿಯವರು ಜ್ಞಾನವೇ ಅಧಿಕವೆಂದು ಬಗೆದು ಹಗಲಿರುಳು ಅದರ ಸಾಧನೆಯಲ್ಲಿ ತೊಡಗಿರುತ್ತಾರೆ. ಜ್ಞಾನ ಪ್ರಿಯಗಳ ಸಂಗಮವಾದ ಇವರ ಜೀವನವು ಸರ್ವರಿಗೂ ಅನುಕರಣೀಯವಾಗಿದೆ ಎಂದು ವರ್ಣಿಸುತ್ತಾರೆ. ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಚಡಚಣ ಗ್ರಾಮವು ಸಿಂಪಿರವರಿಗೆ ಜನ್ಮ ಕೊಟ್ಟ ಊರು. ಜಾನಪದ ಪಿತಾಮಹಾರೆನಿಸಿಕೊಂಡ ಪೂಜ್ಯ ಶ್ರೀ ಸಿಂಪಿ ಲಿಂಗಣ್ಣನವರೆ ಇವರ ತಂದೆಯವರು. ತಾಯಿಯವರ ಹೆಸರು ಸೋಲಬವ್ವ. ವಿದ್ಯಾರ್ಥಿ ಜೀವನದಲ್ಲಿಯೇ ಇವರು ನಿಬಂಧ ಸ್ಪರ್ಧೆಯಲ್ಲಿ ಭಾಗವಹಿಸಿ ಪ್ರಥಮ ಬಹುಮಾನ ಪಡೆಯುತ್ತಿದ್ದರು. ಶ್ರೀ ಬಿ.ಟಿ.ಸಾಸನೂರು ಕಾಲೇಜಿನಲ್ಲಿ ಇವರು ಕನ್ನಡ ಪ್ರಾಧ್ಯಾಪಕರಾಗಿದ್ದರು. ೧೯೬೩ ರಲ್ಲಿ ಇಂಗ್ಲೀಷ ಪ್ರಾಧ್ಯಾಪಕರಾಗಿ ಬೀದರಿಗೆ ವರ್ಗಾವಣೆ ಮಾಡಿದರು. ಇವರು ಅನೇಕ ಗ್ರಂಥಗಳನ್ನ ಬರೆದಿದ್ದಾರೆ. ಇವುಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿದೆ. ಇವರು ಬೀದರಿಗೆ ಬಂದು ನೆಲೆಸಿದುದು ಬೀದರ ಸಾಹಿತಿಗಳಿಗೆ ಕಾಮಧೇನು ದೊರಕಿದಂತಾಗಿದೆ.

೫. ಬೀದರ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರು .

ಪುಸ್ತಕದ ಪ್ರಕಾಶಕರು ಜಿಲ್ಲಾ ಆಡಳಿತ ಬೀದರ. ಈ ಗ್ರಂಥದ ಪ್ರಧಾನ ಸಂಪಾದಕರು ಪ್ರೋ.ವೀರೇಂದ್ರ ಸಿಂಪಿಯವರು. ಪಂಚಾಕ್ಷರಿ ಪುಣ್ಯಶೆಟ್ಟಿಯವರು ಈ ಗ್ರಂಥದಲ್ಲಿ ಬಸವಕಲ್ಯಾಣದ ಗೋಪಾಲರಾವ ಮುಡಬಿಯವರ ಬಗ್ಗೆ, ಬೀದರ ತಾಲುಕಿನ ಸ್ವಾತಂತ್ರ್ಯ ಹೋರಾಟಗಾರರಾದ ಗುರಪ್ಪಾ ಲಾಡಗೇರಿ, ಬ್ರಿಜಪಾಲ್ ಸಿಂಗ್ ಠಾಕೂರ, ಭೀಮಣ್ಣಾ ಮಜಗೆ, ಮಹಾಂತಪ್ಪಾ ಮಡಕಿ, ರಾಮಣ್ಣಾ ಕ್ಯಾಪಾ ಇವರ ವ್ಯಕ್ತಿ ಚಿತ್ರಣ ಬರೆದಿದ್ದಾರೆ. ಭಾಲ್ಕಿ ತಾಲೂಕಿನ ಭೀಮಣ್ಣಾ ಖಂಡ್ರೆ ಹುಮನಾಬಾದ ತಾಲೂಕಿನ ಪಂಡಿತ ಸಿದ್ರಾಮಜಿ ಆರ್ಯ, ಬಸವಣಪ್ಪಾ ಶೇರಿಕಾರ ಬಸವರಾಜ ಪಾಟೀಲ ರಾಜೇಶ್ವರ, ಬಸವರಾಜ ಹುಡಗಿ, ವಿ.ಎನ್.ಪಾಟೀಲ ಮುಂತಾದವರ ಬಗ್ಗೆ ವ್ಯಕ್ತಿ ಚಿತ್ರ ಸುಂದರವಾಗಿ ಚಿತ್ರಿಸಿದ್ದಾರೆ.

**ಅಪ್ರಕಟಿತ :**

**೧. ಬಿ. ಟಿ. ಸಾಸನೂರು:**

ಬಿಜಾಪುರ ಜಿಲ್ಲೆಯ ಬಾಗೇವಾಡಿ ತಾಲೂಕಿನ ಸಾಸನೂರ ಎಂಬ ಗ್ರಾಮದಲ್ಲಿ ಭೀಮಸೇನ ೧೨-೧೨-೧೯೨೯ ರಂದು ಜನಿಸಿದರು. ತಂದೆ ತುಳಜಪ್ಪಾ ತಾಯಿ ನಾಬವ್ವ ಇವರು ಬಡವರು. ಧಾರವಾಡದ ವಿದ್ಯಾರಣ್ಯ ಪ್ರೌಢ ಶಾಲೆಯಲ್ಲಿ ಕಲಿಯುವಾಗ ಶಂಭಾ ಜೋಷಿ ಹಾಗೂ ಕೆ.ಜಿ.ನಾಡಗೇರ ಶಿಕ್ಷಕರಾಗಿದ್ದರು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಂ.ಎ. ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿದ್ದರು. ಇವರು ಬೀದರಿಗೆ ೧೯೬೦ ರಲ್ಲಿ ಪ್ರಾಚಾರ್ಯರಾಗಿ ಆಗಮಿಸಿದ್ದರು. ಅವರು ಶ್ರಮವಹಿಸಿ ಕಟ್ಟಿದ ಭೂಮರೆಡ್ಡಿ ಕಾಲೇಜಿನ ಭವ್ಯ ಕಟ್ಟಡ ಬೀದರ ನಾಗರಿಕರಿಗೆ ಸಾಸನೂರರ ನೆನಪನ್ನು ಮಾಡಿಕೊಡುತ್ತದೆ. ಸುಮಾರು-ವರ್ಷಗಳ ಇವರ ಆಡಳಿತ ಕಾಲಾವಧಿಯಲ್ಲಿ ಕಾಲೇಜಿಗೆ ಆಗಮಿಸಿದವರೆಂದರೆ ದ.ರಾ.ಬೇಂದ್ರೆ, ವಿ.ಕೃ.ಗೋಕಾಕ, ಶಿವರಾಮ ಕಾರಂತ, ಚನ್ನವೀರ ಕಣವಿ , ಪ್ರೊ. ಭೂಸನೂರು ಮಠ, ಬೀಚಿ, ಲೋಕಸಭಾ ಸ್ಪೀಕರ ಹುಕುಮಸಿಂಗ್, ರಾಷ್ಟ್ರಪತಿ ಸಂಜೀವರೆಡ್ಡಿ, ರಾಷ್ಟ್ರಪತಿ ವಿ.ವಿ.ಗಿರಿ, ಮುಖ್ಯ ಮಂತ್ರಿಗಳಾದ ನಿಜಲಿಂಗಪ್ಪಾ, ರಾಮಕೃಷ್ಣ ಹೆಗಡೆ, ವೀರೇಂದ್ರ ಪಾಟೀಲ ಮುಂತಾದ ಗಣ್ಯರು ಆಗಮಿಸಿ ಕಾಲೇಜಿನ ಘನತೆ ಹೆಚ್ಚುವಂತೆ ಮಾಡಿದರು. ಮುಂದೆ ಇವರು ಲೋಕ ಸೇವಾ ಆಯೋಗದ ಸದಸ್ಯರಾದರು. ಅನೇಕ ಬಡವರಿಗೆ ನೌಕರಿ ದೊರಕಿಸಿಕೊಟ್ಟರು. ಇವರ ಮಗ ವಿಜಯಾ ಸಾಸನೂರ ಸಾಹಿತ್ಯ ಲೋಕದ ಧೃವತಾರೆ ಎನಿಸಿಕೊಂಡ ಅಕಾಲ ಮರಣಕ್ಕೆ ತುತ್ತಾದರು.

ಇವರ ಬಗ್ಗೆ ಅವರ ಶಿಷ್ಯರಾದ ಎಮ್.ಎಮ್.ಕಲ್ಬುರ್ಗಿಯವರು ಹೀಗೆ ಹೇಳುತ್ತಾರೆ. ಹಳೆಗನ್ನಡ ಕಾವ್ಯಗಳ ನಿಶ್ಚಿತವಾದ ಅಧ್ಯಯನ, ಹಳೆಗನ್ನಡ ಭಾಷೆಯ ನಿಶ್ಚಿತವಾದ ಪರಿಜ್ಞಾನದ ದೃಷ್ಟಿಯಿಂದ ಸಮಗ್ರ ಕರ್ನಾಟಕದಲ್ಲಿಯೇ ಬಿ.ಟಿ. ಸಾಸನೂರರನ್ನು ಸರಿಗಟ್ಟುವವರು ಕೇವಲ ಹತ್ತು ಜನ ಸಿಗಬಹುದು. ಇದಕ್ಕೆ ಹೆಚ್ಚಿನದಾಗಿ ಇವರಿಗೆ ಸಂಸ್ಕೃತ, ಹಿಂದಿ, ಇಂಗ್ಲೀಷ ಭಾಷೆಗಳಲ್ಲಿ ವಿಶೇಷ ಪರಿಶ್ರಮವಿದೆ.

ಇವರ ವಿದ್ಯಾರ್ಥಿಗಳಾದ ಮ.ಗು.ಬಿರಾದರ ಅವರ ಹೇಳಿಕೆ ಹೀಗಿದೆ, ಕರ್ನಾಟಕದಲ್ಲಿರುವ ಕೈ ಬೆರಳೆಣಿಕೆಯ ವಿದ್ವಾಂಸರಲ್ಲಿ ಇವರೊಬ್ಬರು. ಕೇಶಿರಾಜನ ಶಬ್ದಮಣಿ ದರ್ಪಣದ ಬಗ್ಗೆ ಏನಾದರು ಹೇಳಬೇಕಾದರೆ ಅವರೇ ಹೇಳಬೇಕು ಎಂದು ವರ್ಣಿಸಿದ್ದಾರೆ. ಸಾಸನೂರರ ಶ್ರೀಮತಿಯಾದ ಸುಮಿತ್ರಾಬಾಯಿಯವರು ಎಲ್ಲರು ಮನೆಗೆದ್ದು ಮಾರುಗೆದ್ದರೆ ಮನೆಯೊದ್ದು ಮಾರು ಗೆದ್ದಿರುವರು ಎಂದು ಉದ್ಗರಿಸಿದ್ದುಂಟು. ಇಂತಹ ಮಹಾನುಭಾವರು ಪಾರ್ಕಿನ್‌ಸನ್ ರೋಗದಿಂದ ನರಳಿ ದಿನಾಂಕ

೦೪-೦೮-೨೦೦೩ ರಂದು ಅಸುನೀಗಿದರು ಎಂದು ಈ ಲೇಖನದಲ್ಲಿ ಹೇಳಿದೆ.

**೨. ನಾ ಕಂಡಂತೆ ಶಾಂತರಸ ರಾಯಚೂರು:**

ಪಂಚಾಕ್ಷರಿ ಪುಣ್ಯ ಶೆಟ್ಟಿಯವರು ಶಾಂತರಸ ರಾಯಚೂರು ಅವರನ್ನ ಕುರಿತ 'ಅಪ್ಪ' ಎಂಬ ಗ್ರಂಥಕ್ಕೆ ಈ ಲೇಖನವನ್ನು ಕಳುಹಿಸಿದ್ದಾರೆ. ಈ ಲೇಖನವು ಮುದ್ರಣ ಹಂತದಲ್ಲಿದೆ. ಈ ಲೇಖನದಲ್ಲಿ ಪಂಚಾಕ್ಷರಿಯವರು ಶಾಂತರಸರೊಡನೆ ಬೆರೆತ ಕೆಲವು ಸಂದರ್ಭಗಳನ್ನ ಹೃದಯ ತಟ್ಟುವಂತೆ ಬರೆದಿದ್ದಾರೆ. ಅಲ್ಲದೆ ಶಾಂತಸರು ಅನೇಕ ಹೊಸ ಹೊಸ ಸಾಹಿತಿಗಳನ್ನ ರಾಜ್ಯ ಮಟ್ಟದಲ್ಲಿ ಬೆಳೆಸಿದ್ದನ್ನು ಕೊಂಡಾಡಿದ್ದಾರೆ. ಹಾಗು ಅವರು ಮತ್ತು ಮನೆಯವರು ಅತಿಥಿಗಳಿಗೆ ಸತ್ಕಾರ ಮಾಡಿರುವುದನ್ನು ತಿಳಿಸಿದ್ದಾರೆ. ಹೀಗೆ ಕೆಲವು ವಿಷಯಗಳು ತಾವು ಕಂಡಂತೆ ಈ ಲೇಖನದಲ್ಲಿ ವಿವರಿಸಿದ್ದಾರೆ.

**೩. ಹೈದ್ರಾಬಾದ ಕರ್ನಾಟಕದಲ್ಲಿ ಕನ್ನಡ ಕಟ್ಟಿದವರು.**

ಈ ಗ್ರಂಥವು ಅಪ್ರಕಟಿತವಾಗಿದೆ. ಶಾತರಸರು ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಈ ಪುಸ್ತಕ ಪ್ರಕಟನೆಯ ಹೊಣೆ ಹೊತ್ತಿದ್ದರು. ಅನಿವಾರ್ಯ ಕಾರಣಗಳಿಂದ ನೆರವೇರಲಿಲ್ಲ. ಈಗ ಶ್ರೀಮತಿ ಗೀತಾ ನಾಗಭೂಷಣರವರು ಅಕಾಡೆಮಿಯ ಅಧ್ಯಕ್ಷರಾಗಿದ್ದಾರೆ . ಇವರ ಕಾಲಾವಧಿಯಲ್ಲಿ ಈ ಪುಸ್ತಕ ಪ್ರಕಟವಾಗಬಹುದಾಗಿದೆ ಎಂದು ಪಂಚಾಕ್ಷರಿಯವರು ಹೇಳುತ್ತಾರೆ. ಈ ಪುಸ್ತಕದಲ್ಲಿ ಸುಮಾರು ಹನ್ನೆರಡು ವ್ಯಕ್ತಿಗಳ ಕನ್ನಡ ಹೋರಾಟದ ಬಗ್ಗೆ ಚಿತ್ರಿಸಿದ್ದಾರೆ.

## ಅಧ್ಯಾಯ : ನಾಲ್ಕು

# ಸಮಕಾಲೀನ ದೃಷ್ಟಿಯಲ್ಲಿ ಪಂಚಾಕ್ಷರಿ ಪುಣ್ಯಶೆಟ್ಟಿ

ಕನ್ನಡ ಸಾಹಿತ್ಯ ಲೋಕವನ್ನು ವಿಸ್ತರಿಸುವಲ್ಲಿ ದುಡಿದ ಅನೇಕ ಕೈಗಳಲ್ಲಿ ಹಾಗೂ ಕನ್ನಡದ ಕೆಲಸಕ್ಕಾಗಿ ಹಗಲು ಇರುಳು ಎಂಬದೆ ದುಡಿದಿರುವ, ಜಿಲ್ಲೆಯ ಕನ್ನಡದ ಕಟ್ಟಾಳು, ಎಂದೆ ಹೆಸರಾಗಿರುವ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿ ಅವರ ಆದರ್ಶಮಯ ವ್ಯಕ್ತಿತ್ವ, ಸ್ಫುಟವಾದ ಬರವಣಿಗೆ, ಕನ್ನಡಕ್ಕಾಗಿ ಸಲ್ಲಿಸಿದ ಸೇವೆ, ಇವೆಲ್ಲವುಗಳನ್ನು ಹತ್ತಿರದಿಂದ ಕಂಡ ಅವರ ಸಮಕಾಲೀನ ಕನ್ನಡದ ಸಾಹಿತಿಗಳು, ವಿದ್ವಾಂಸರು, ಕನ್ನಡಪರ ಹೋರಾಟಗಾರರಿಗೆ ಇವರನ್ನ ಕುರಿತು ಅಭಿಪ್ರಾಯ ಬರೆದು ಕೊಡಬೇಕೆಂದು ಕೇಳಿಕೊಂಡಾಗ ಅವರು ತುಂಬು ಹೃದಯದಿಂದ ಆತ್ಮೀಯವಾಗಿ ಒಪ್ಪಿಕೊಂಡು ಬರೆದು ಕೊಟ್ಟಿರುತ್ತಾರೆ. ಅವರ ಅಭಿಪ್ರಾಯಗಳು ಈ ರೀತಿಯಾಗಿವೆ.

೧. ಗಡಿನಾಡಿನಲ್ಲಿ ಕನ್ನಡದ ಕೈಂಕರ್ಯವನ್ನು ಮಾಡುವುದು ಸಾಮಾನ್ಯವೇನಲ್ಲ. ಬೀದರ ಜಿಲ್ಲೆಯಲ್ಲಿ ಅಂಥ ಅಸಾಮಾನ್ಯ ಸೇವೆಯನ್ನು ಮಾಡಿದವರು ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು. ಮಾಡಿಯೂ ಮಾಡದಂತಿರುವ ನಿರ್ಲಿಪ್ತತೆ, ನಿರಹಂತತೆ ಅವರದು.

ಹಲವಾರು ಗಣ್ಯಮಾನ್ಯರ, ಪೂಜ್ಯಪಾದರ ಪಾವನ ಜೀವನ ಚರಿತ್ರೆಯನ್ನು ಇವರು ಬರೆದಿರುವರು. ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಹಾಗೂ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ನಾಡು ನುಡಿಯ ಸೇವೆಯನ್ನೂ ಮಾಡಿದ್ದಾರೆ. ಇವರು ಒಂಭತ್ತನೇ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆದದ್ದು ಇವರ ಬಹುಮುಖ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ.

- ಪೂಜ್ಯ ಶ್ರೀ ಸಿದ್ದೇಶ್ವರ ಸ್ವಾಮಿಗಳು

ವಿಜಾಪುರ.

೨. ಶರಣರಾದ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ವಚನ ಸಾಹಿತ್ಯದ ಆರಾಧಕರು. ವಚನ ಸಾಗರದಲ್ಲಿ ಮುಳುಗಿ ತೇಲಿ ಈಜಾಡಿದವರು. ವಚನ ಧರ್ಮವನ್ನು ಗಟ್ಟಿಯಾಗಿ ಆಚರಣೆಯಲ್ಲಿ ಇಟ್ಟುಕೊಂಡವರು. ಮೌಢ್ಯತೆ, ಡಂಭಾಚಾರ ಆಡಂಬರ ಕಂಡಾಗ ಸಿಡಿದೇಳುವ ಸ್ವಭಾವದವರು. 'ನ್ಯಾಯ ನಿಷ್ಠುರಿ, ದ್ರಾಕ್ಷಿಣ್ಯ ಪರ ನಾನಲ್ಲ. ಲೋಕ ವಿರೋಧಿ ಶರಣ ನಾರಿಗೆಯೂ ಅಂಜುವನಲ್ಲ' ಎಂಬ ಬಸವವಾಣಿ ಅವರ ನಿತ್ಯ ಬದುಕಿನಲ್ಲಿ ಎದ್ದು ಕಾಣುತ್ತದೆ. ಎಪ್ಪತ್ತರ ಹತ್ತಿರ ಅವರ ವಯಸ್ಸಾದರು ಇಪ್ಪತ್ತರ ಯುವಕರು ನಾಚುವಷ್ಟು ಕಾರ್ಯ ಮಾಡುತ್ತಾರೆ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಜಿಲ್ಲಾ ಘಟಕದ ಅಧ್ಯಕ್ಷರಾಗಿ ಬಸವ ಧರ್ಮ ಪ್ರಸಾರಕ್ಕೆ ತಮ್ಮನ್ನು ತಾವು ಅರ್ಪಿಸಿಕೊಂಡು ದುಡಿಯುತ್ತಿದ್ದಾರೆ.

ಪೂಜ್ಯ ಶ್ರೀ ಬಸವಲಿಂಗ ಪಟ್ಟದ್ದೇವರು

ಹಿರೇಮಠ ಸಂಸ್ಥಾನ ಭಾಲ್ಕಿ

(ಡಾ. ಚನ್ನಬಸವ ಪಟ್ಟದ್ದೇವರ ಹೋರಾಟದ ಬದುಕು -ಆಶೀರ್ವಾದ)

೩. ಕಲ್ಯಾಣ ಕರ್ನಾಟಕದ ನೆಲದಲ್ಲಿ ಅರಳಿದ ಪುಣ್ಯಶೆಟ್ಟಿ. ಆ ನೆಲದ ಶರಣ ತತ್ವವನ್ನು ಹುಟ್ಟಿನಿಂದಲೇ ಮೈಗೂಡಿಸಿಕೊಂಡು ಬಂದಿರುವ ವಿರಳರಲ್ಲಿ ವಿರಳರು; ತುಂಬ ಸರಳರು. ಯಾರನ್ನಾದರು ಕಾರಣವಿಲ್ಲದ ಹೊಗಳುವ ಅಥವಾ ಯಾರಿಂದಲಾದರೂ ಹೊಗಳಿಸಿಕೊಳ್ಳುವ ಎರಡೂ ಸ್ವಭಾವಗಳಿಲ್ಲದ ಸಜ್ಜನ ವ್ಯಕ್ತಿ. ಸಹಜ ಮಾನವ ಸಂಸ್ಕೃತಿಗೆ ಒಂದು ಮೇಲ್ಪಂಕ್ತಿ!

ಪಂಚಾಕ್ಷರಿ ಪುಣ್ಯಶೆಟ್ಟಿಯವರಿಗೆ ನೆಲವೆಂದರೆ ಕಲ್ಯಾಣದ ನೆಲ; ನಾಡೆಂದರೆ ಕನ್ನಡ ನಾಡು; ನುಡಿಯೆಂದರೆ ಕನ್ನಡ ನುಡಿ; ಸಾಹಿತ್ಯವೆಂದರೆ ವಚನ ಸಾಹಿತ್ಯ; ಧರ್ಮವೆಂದರೆ ಶರಣಧರ್ಮ; ಗುರುವೆಂದರೆ ಬಸವಣ್ಣನವರು; ಸಮಾಜವೆಂದರೆ ಮಾನವ ಸಮಾಜ; ಅವರ ಬದುಕಿನ ವೀಣೆಯ ಯಾವ ತಂತಿಯನ್ನು ಮಿಡಿದರು ಈ ಶೃತಿಗಳೇ ಹೊಮ್ಮುತ್ತವೆ. ಇಷ್ಟು ಬಿಟ್ಟು ಉಳಿದುದ್ದನ್ನು ಪರಿಭಾವಿಸಲು ಒಲ್ಲದ ಮನಸ್ಸು ಅವರಿಗೀಗ ಎಪ್ಪತ್ತು ದಾಟಿದ ವಯಸ್ಸು ಆದರೂ ಗಣಾಚಾರದ ಹುಮ್ಮಸ್ಸು.

ಗೊ.ರು.ಚನ್ನಬಸಪ್ಪ
ಅಧ್ಯಕ್ಷರು
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಬೆಂಗಳೂರು.

೪. ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ನನಗೆ ಹತ್ತಿರವಾಗಿರುವ ನನ್ನ ಸಮಕಾಲೀನ ಗೆಳೆಯರು. ನಾವು ಒಂದೇ ಕಾಲಮಾನದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ದುಡಿದಿದ್ದೇವೆ. ನಾನು ಭಾಷಾ ಶಿಕ್ಷಕರಾಗಿದ್ದರೆ ಅವರು ವ್ಯಾಯಾಮ(ಪಿ.ಟಿ.) ಶಿಕ್ಷಕರಾಗಿದ್ದರು. ನಾನು ಅವರನ್ನು ಮುದ್ದಣನೊಂದಿಗೆ ಹೋಲಿಸುತ್ತೇನೆ. ಅವರನ್ನ ಕನ್ನಡದ ಕಣ್ವ ಬಿ. ಎಂ.ಶ್ರೀ. ಅವರೊಂದಿಗೆ ಹೋಲಿಸುತ್ತೇನೆ. ಕನ್ನಡ ನಾಡು ನುಡಿಯ ಬಗ್ಗೆ ಅವರಿಗಿರುವ ಅಭಿಮಾನವನ್ನು ಕಂಡು ಅವರನ್ನು ಜಿ.ಪಿ.ರಾಜರತ್ನಂ ಅವರೊಂದಿಗೆ ಹೋಲಿಸುತ್ತೇನೆ. ಹೀಗಾಗಿ ಪಂಚಾಕ್ಷರಿ ಪುಣ್ಯಶೆಟ್ಟಿಯವರು ನನ್ನ ದೃಷ್ಟಿಯಲ್ಲಿ ಬೀದರ ಜಿಲ್ಲೆಯ ಮುದ್ದಣನೂ ಅಹುದು. ಬೀದರ ಜಿಲ್ಲೆಯ ಕಣ್ವರೂ ಅಹುದು. ಮತ್ತು ಬೀದರ ಜಿಲ್ಲೆಯ ಜಿ.ಪಿ.ರಾಜರತ್ನಂ ಅವರೂ ಅಹುದು.

ಶ್ರೀ ಬಿ.ಎಸ್.ಖೂಬಾ
ಗಡವಂತಿ, ತಾ.ಹುಮನಾಬಾದ.
ಜಿ.ಬೀದರ.

೫. ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಬಹಳ ವಿಶಿಷ್ಟವಾದ ವ್ಯಕ್ತಿತ್ವವಾಗಿದೆ. ಅವರು ಮುಗ್ಧರಾದವರಾದರೂ ನೇರ ನುಡಿಗಳನ್ನು ನುಡಿಯುವವರಾಗಿದ್ದಾರೆ. ಸುಮಾರು ಹನ್ನೆರಡು ವರ್ಷಗಳ ಹಿಂದೆ ಬಸವಾದಿ ಪ್ರಮಥರ ವಚನಗಳಾಧಾರಿತ 'ವಚನೋತ್ಸವ ' ಎಂಬ ಸತ್ಯಯುಗದ ಕಾರ್ಯಕ್ರಮವನ್ನು ಬೀದರನಲ್ಲಿಯೂ ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರ ನೇತೃತ್ವದಲ್ಲಿ ಪ್ರಾರಂಭಿಸಲಾಯಿತು. ಅವರ ನಿಷ್ಠೆ ಎಷ್ಟಿತ್ತೆಂದರೆ ಅವರು ಸೈಕಲ್ಲನ್ನು ತುಳಿಯುತ್ತಲೆ ಬೀದರ ನಗರದ ನಾಲ್ಕಾರು ಬಡಾವಣೆಗಳಿಗೆ, ಈ ಓಣಿ-ಓಣಿಯ ಮನೆ-ಮನೆಗಳಿಗೆ ಕಾರ್ಯಕ್ರಮವನ್ನು ವಿಸ್ತರಿಸಿಯೇ ಬಿಟ್ಟರು. ತಾವು ಈ ಕಾರ್ಯಕ್ರಮಗಳಲ್ಲಿ ಭಾಗಿಯಾಗುತ್ತಿದ್ದರು. ಅದು ತಮ್ಮ ಇಳಿವಯಸ್ಸಿನಲ್ಲಿ! ಒಂದು ಓಣಿಯವರು ಈ ಕಾರ್ಯಕ್ರಮವನ್ನು ಬೇರೆ ಹೆಸರಿಗೆ ಪರಿವರ್ತಿಸಿದಾಗ ಅವರು ಕೆಂಡಾಮಂಡಲವು

ಆಗಿದ್ದರು. ಅವರನ್ನು ನಾನೇ ಸಮಾಧಾನ ಮಾಡಬೇಕಾಯಿತು. ಪಂಚಾಕ್ಷರಿಯವರು ಎಂತಹ ಮುಗ್ಧರು ಮತ್ತು ವಿಶಾಲ ಹೃದಯಿಗಳೆಂಬುದನ್ನು ಈ ಮುಂದಿನ ಘಟನೆ ತೋರಿಸಿಕೊಡುತ್ತದೆ. ಕುಂಬಾರವಾಡಿ ಓಣಿ ವಚನ ಮಹೋತ್ಸವ ಕಾರ್ಯಕ್ರಮದ ಬೆಳ್ಳಿ ಹಬ್ಬದ ಸಂದರ್ಭದಲ್ಲಿ ಅವರು ನನಗೆ ಮಾಲಾರ್ಪಣೆ ಮಾಡುತ್ತಲೇ ನನ್ನ ಕಾಲಿಗೂ ಬಿದ್ದರು. ಆಗ ನಾನು ದಿಗ್ಭ್ರಮೆಯಿಂದ ಏನ್ರಿ! ನೀವು ನನಗಿಂತ ಹಿರಿಯರು. ಹೀಗೆ ಮಾಡಬಾರದಿತ್ತು ಎಂದು ನುಡಿದಾಗ ಅವರು ಒಳ್ಳೆಯ ಕೆಲಸ ಮಾಡುವಾತ ಹಿರಿಯನಾದರೇನು? ಕಿರಿಯನಾದರೇನು? ವಚನೋತ್ಸವದ ಮೂಲಕ ಶರಣ ಸೇವೆ ಮಾಡುತ್ತಿರುವುದರಿಂದ ನೀವೇ ಹಿರಿಯರು! ಎಂದು ಮರು ನುಡಿದಾಗ ನನ್ನ ಗಂಟಲು ತುಂಬಿಕೊಂಡು ಬಂದಿತ್ತು.

ಡಾ. ಬಸವರಾಜ ಮೋದಿ.
ಎಂ.ಡಿ.
ವಿಶ್ವೇಶ್ವರಯ್ಯ ನಗರ, ಕಲಬುರ್ಗಿ.

೬. ಪುಣ್ಯಕೋಟಿಯ ಕಥೆ ಕನ್ನಡ ನಾಡಿಗೆ ಗೊತ್ತು. ಆದರೆ ಪುಣ್ಯಶೆಟ್ಟಿಯ ವ್ಯಕ್ತಿತ್ವ ಬೀದರಗಷ್ಟೇ ಸೀಮಿತ. ಕನ್ನಡ, ಶರಣರು, ವಚನ, ಮುಗ್ಧತೆ ಮತ್ತು ನಿರಾಡಂಬರ ಇರುವು ಇವು ಪಂಚಾಕ್ಷರಿಯವರ ಪಂಚಾಕ್ಷರಿ ಮಂತ್ರ. ಕಳೆದ ಐವತ್ತು ವರ್ಷಗಳಿಂದಲೂ ಅವರನ್ನು ಗಮನಿಸುತ್ತಲೇ ಇದ್ದೇನೆ. ಏನು ಬದಲಾಗದ ಅವರ ಬದುಕೇ ಒಂದು ಪವಾಡ. ಭಾಷೆಯ ಶಿಖರಕ್ಕೇರಲಿಲ್ಲ. ಶರಣರ ವಿಚಾರದ ಆಳಕ್ಕೆ ಇಳಿಯಲೇ ಇಲ್ಲ! ಶರಣ ನಿಷ್ಠೆಯ ನಿರಾಡಂಬರ, ಓದುದು, ನಿಗರ್ವಿನಡೆ, ಯಾರು ಏನು ಹೇಳಿದರು ತನ್ನದನ್ನ ಬಿಡದ ಜಿಗುಟುತನ. ಸರಳ ಸ್ವಭಾವಕ್ಕೆ ಇನ್ನೊಂದು ಹೆಸರು ಪಂಚಾಕ್ಷರಿ ಪುಣ್ಯಶೆಟ್ಟಿ! ನಂಬುಗೆ ವಿಶ್ವಾಸದಂತಹ ಮಾನವ ಮೌಲ್ಯಗಳನ್ನು ದುರ್ಬಳಕೆ ಮಾಡಿಕೊಳ್ಳುವ ಬಲ ಅವರಿಗೆ ಬರಲೇ ಇಲ್ಲ. ತೀರ ಒಳಿತುತನದಿಂದಾಗಿಯೇ ಅವರು ಬೆಳೆಯಲಿಲ್ಲ.  ಹೊಳೆಯಾಗಿ ಹರಿಯದ ಕೆರೆಯಾಗಿ ಕರಗದ ಸ್ಥಿತಿ ಅವರದು.

ಈ ವಯಸ್ಸಿನಲ್ಲಿಯೂ ಅವರು ಮುಗ್ದರು, ಲೌಕಿಕದ ಏಚು ಪೇಚುಗಳನ್ನರಿಯದ ಸದಾಸುಖಿ, ಹಸನ್ಮುಖಿ! ವ್ಯಸನ ದೂರ, ಹವ್ಯಾಸಾತೀತ, ವೈರ ನಿಷ್ಠುರ ಇಲ್ಲ. ಸ್ನೇಹ ಸಂಭ್ರಮಿಯು ಅಲ್ಲ ಬಂದ ಬದುಕನ್ನು ಅಪ್ಪಿಕೊಂಡ ಸಂತೃಪ್ತ. ಈ ಕಾಲದಲ್ಲಿ ಕಾಣದೊರೆಯದ ವಿರಳ ವ್ಯಕ್ತಿತ್ವ ಅವರದು. ಅವರನ್ನು ಸಾಹಿತಿ ಶರಣ ಎಂದು ನಾನು ಉತ್ಪ್ರೇಕ್ಷಿಸುವುದೂ ಇಲ್ಲ. ಸಜ್ಜನ ಸ್ವಾಭಿಮಾನಿ ಒಬ್ಬ ಒಳ್ಳೆಯ ಮನುಷ್ಯ ಅವರ ಈ ಅಪರೂಪದ ವ್ಯಕ್ತಿತ್ವವನ್ನು ಒಂದೇ ಮಾತಿನಲ್ಲಿ ಸಂಗ್ರಹಿಸಬಹುದಾದರೆ "A man with simple living and simple thinking and happpy in his own way." ಬೆಳ್ಳಗಿನದೆಲ್ಲ ಹಾಲೆನ್ನುವ ಪುಣ್ಯಶೆಟ್ಟಿ ಪಂಚಾಕ್ಷರಿ ನಮಗೇನೋ ಸುಸಂಸ್ಕೃತ ವ್ಯಕ್ತಿ. ಆದರೆ ಮಿಸ್ಸೈಲ್‌ಗತಿಯ ಈ ಕಾಲದಲ್ಲಿ ಅವರನ್ನು ಆದರ್ಶರೆಂದು ಯಾರು ಹೇಳರು. ಏನೆಂದರು ಅವರು ತಮ್ಮ ಸ್ವಂತಿಕೆಯನ್ನು ಬಿಟ್ಟು ಕೊಡರು.

ಡಾ. ಎಂ.ಜಿ.ಬಿರಾದರ
'ಚಿತ್ಕಳಾ' ಸೇಡಂ ರಸ್ತೆ, ಗುಲಬರ್ಗಾ.

೭ . ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರನ್ನು ನಾನು ಸುಮಾರು ಐವತ್ತೊಂದು ವರ್ಷಗಳಿಂದ ಬಲ್ಲವನಾಗಿದ್ದೇನೆ. ಅಂದಿನಿಂದ ಇಂದಿನವರೆಗೆ ಅವರು ಕನ್ನಡದ ಕಟ್ಟಾಳುವಾಗಿ ದುಡಿದು ದುಡಿದು ಬೆಳೆದಿದ್ದಾರೆ. ಅವರನ್ನು ಯಾರು ಬೆಳೆಸಿಲ್ಲ, ತಮ್ಮ ಅಂತರಂಗದ ಪ್ರೇರಣೆಯಿಂದಲೇ ಅವರು ಕನ್ನಡದ ಬೆಟ್ಟವಾಗಿದ್ದಾರೆ.

ಉತ್ತಮ ಚಾರಿತ್ರ್ಯ ಉಳ್ಳಂಥ ಅವರು ಹಲವರ ಚಾರಿತ್ರ್ಯವನ್ನ ಸೆರೆಹಿಡಿದು ಗ್ರಂಥಸ್ಥಗೊಳಿಸಿದ್ದಾರೆ. ಕಲಬುರ್ಗಿ ಜಿಲ್ಲೆ ಐನೋಲಿಯಿಂದ ಬೀದರ ನಗರಕ್ಕೆ ಅವರು ಬಾರದಿದ್ದರೆ ಬೀದರ ಕನ್ನಡವು ಕೊರತೆಯನ್ನು ಅನುಭವಿಸುತ್ತಿತ್ತು.

ಅವರು ಹೆಮ್ಮರವಿದ್ದಂತೆ! ಹೆಮ್ಮರದ ಕೆಳಗೆ ಇನ್ನೊಂದು ಮರ ಹುಟ್ಟಲಿಲ್ಲ. ಕನ್ನಡ-ಲಿಂಗಾಯತ-ಶರಣ ಸಾಹಿತ್ಯ ಬಿಟ್ಟು ಆಚೆ ಈಚೆ ನೋಡುವ ಹಂಬಲ ತೋರದ ಏಕಾಗ್ರತೆಯುಳ್ಳವರವರು. ವಂದನೀಯ ಪುರುಷರು.

ಶ್ರೀ ದೇಶಾಂಶ ಹುಡುಗಿ
ಅಲ್ಲಮ ಪ್ರಭು ನಗರ, ಬೀದರ.

೮ . ಪಂಚಾಕ್ಷರಿ ಪುಣ್ಯಶೆಟ್ಟಿ ಮತ್ತು ನಾನು ಈರ್ವರೂ ಗೆಳೆಯರು. ಅವರನ್ನು ಹತ್ತಿರದಿಂದ ಕಾಣುವ ಸೌಭಾಗ್ಯ ನನಗೆ ಉಂಟಾದದ್ದು ಚಿಕ್ಕಂದಿನಿಂದಲೇ. ಅವರದು ತೆರೆದ ವಿಶಾಲ ಮನಸ್ಸು. ಅವರಲ್ಲಿ ಒಳ್ಳೆಯತನ ಮತ್ತು ಸಮಯ ಪ್ರಜ್ಞೆಯನ್ನು ಚಾಚು ತಪ್ಪದೆ ಪಾಲಿಸುವುದನ್ನು ಕಂಡಿದ್ದೇನೆ. ಜ್ಯೋತಿಯಿಂದ ಬೆಳಕು ಹರಡಿದಾಗ ಕತ್ತಲೆ ಕರಗುತ್ತದೆ. ಅಂತೆಯೇ ಪುಣ್ಯಶೆಟ್ಟಿಯವರು ತಮ್ಮ ಒಳ್ಳೆಯ ನಡೆಗಳಿಂದ ಹಿತ-ಮಿತ ನುಡಿಗಳಿಂದ ದೋಷಗಳನ್ನಳಿಸಿ ಎಲ್ಲರೊಂದಿಗೆ ಸಂಪ್ರೀತಿಯನ್ನೇ ಹಂಚಿಕೊಂಡಿದ್ದಾರೆ. ಅವರು ಶಿಕ್ಷಣ ರಂಗ, ಸಾಹಿತ್ಯಕ್ಷೇತ್ರ ಎರಡರಲ್ಲೂ ಯಶಸ್ವಿಯಾಗಿ ತಮ್ಮ ಉದ್ದೇಶಗಳನ್ನ ಈಡೇರಿಸಿಕೊಂಡಿದ್ದ ಅವರ ಮನೋಸ್ಥೈರ್ಯದ ಪ್ರಾಮಾಣಿಕ ಪ್ರಯತ್ನದ ದುಡಿಮೆ ಎಂದು ನನಗನ್ನಿಸುತ್ತದೆ. ಅವರು ಬರೆದ ಸತ್ಪುರುಷರ ಜೀವ ಚರಿತ್ರೆಗಳು, ಕೃತಿಗಳು ಪ್ರಾತಃ ಸ್ಮರಣೀಯವಾಗಿವೆ. ನಿಜವಾಗಿ ಅವರ ಬದುಕೇ ನಮಗೆ ಬೆಳಕಿದ್ದಂತೆ.

ಗುರುಸಿದ್ದಪ್ಪ ಸೋಮಶೆಟ್ಟಿ
ಬೀದರ.

೯ . ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿ ಅವರು ಧಾರ್ಮಿಕ ಜೀವಿಗಳು. ನ್ಯಾಯ ನಿಷ್ಠುರರು. ಹೋರಾಟಗಾರರು. ಕನ್ನಡ ಪ್ರೇಮಿಗಳು. ಸರಳ ಜಿವಿಗಳು. ಅವರ ಈ ವ್ಯಕ್ತಿತ್ವ ಪೂಜ್ಯ ಚನ್ನಬಸವ ಪಟ್ಟದ್ದೇವರ ವ್ಯಕ್ತಿತ್ವದೊಂದಿಗೆ ಸಮರಸಗೊಂಡಿದೆ. ಅವರು ಬರೆದ ಡಾ. ಚನ್ನಬಸವ ಪಟ್ಟದೇವರ ಹೋರಾಟದ ಬದುಕು ಈ ಗ್ರಂಥದಲ್ಲಿ ಗ್ರಂಥದ ನಾಯಕ ಹಾಗೂ ಬರಹಗಾರರ ವ್ಯಕ್ತಿತ್ವದಲ್ಲಿ ಸಾಮ್ಯತೆ ಕಂಡು ಬರುತ್ತದೆ. ಆದ್ದರಿಂದ ಈ ಗ್ರಂಥವು ಪರಿಣಾಮಕಾರಿಯಾಗಿದ್ದು ಪಟ್ಟದ್ದೇವರ ಜೀವನ ಚರಿತ್ರೆಗಳಲ್ಲಿ ಒಂದು ಯಶಸ್ವಿ ಕೃತಿಯಾಗಿದೆ.

ಡಾ. ಜಿ.ಬಿ.ವಿಸಾಜಿ
ಹಿರಿಯ ಸಾಹಿತಿಗಳು, ಭಾಲ್ಕಿ.

೧೦. ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ತೀರ ಸರಳ ವ್ಯಕ್ತಿಗಳು. ಸರಳ ಜೀವನದಂತೆ ಅವರದೂ ತತ್ವನಿಷ್ಠ ಜೀವನವೂ ಹೌದು. ಅವರಷ್ಟು ಕನ್ನಡಾಭಿಮಾನಿಗಳು ಬಹಳ ಕಡಿಮೆ ಜನ ಸಿಗುತ್ತಾರೆ. ಕಳೆದ ನಲ್ವತ್ತು-ಐವತ್ತು ವರ್ಷಗಳಿಂದ ಅವರು ಬೀದರ ಜಿಲ್ಲೆಯಲ್ಲಿ ಕನ್ನಡ ನಾಡು ನುಡಿಗಳ ಸೇವೆಯಲ್ಲಿ ತೊಡಗಿದ್ದಾರೆ. ಕನ್ನಡಕ್ಕೆ ಕುತ್ತು ಬಂದರೆ ಅವರು ಕಿಡಿ ಕಿಡಿಯಾಗುತ್ತಾರೆ ಎಂಥವರನ್ನು ಎದುರು ಹಾಕಿಕೊಳ್ಳಲು ಹಿಂದೆ ಮುಂದೆ ನೋಡುವುದಿಲ್ಲ. ಅವರಿಗೆಷ್ಟು ಕನ್ನಡಾಭಿಮಾನವಿದೆಯೋ ಅದಕ್ಕಿಂತಲು ಹತ್ತು ಪಟ್ಟು ಬಸವತತ್ವವನ್ನು ಕುರಿತು ಅಭಿಮಾನ ವ್ಯಕ್ತಪಡಿಸುತ್ತಾರೆ. ಅಂತೆಯೇ ಅವರಿಗೆ ಕನ್ನಡ ಒಂದು ಕಣ್ಣಾದರೆ - ಬಸವತತ್ವ ಇನ್ನೊಂದು ಕಣ್ಣಾಗಿದೆ. ಮತ್ತೆ ಪಂಚಾಕ್ಷರಿ ಭಾವುಕರು. ಭಕ್ತಿ ಶ್ರದ್ಧೆಗಳು ಅವರ ಸದ್ಗುಣಗಳು. ಇವೆಲ್ಲವುಗಳಿಗಿಂತ ಸಾಹಿತಿಗಳ ಕುರಿತು ಅವರ ಪ್ರೇಮ ಮಿತಿಮೀರಿದೆ. ಯಾರಾದರು ಸಾಹಿತಿಗಳು ಬೀದರಗೆ ಬಂದರೆ ತಮ್ಮ ಮನೆಮಾರುಗಳನ್ನು ಮರೆತು ಅವರ ಜೊತೆ ಹಗಲು ರಾತ್ರಿ ಓಡಾಡುತ್ತಾರೆ. ಈ ರೀತಿ ಅವರು ತಿ. ತಾ. ಶರ್ಮ, ಬೆಟಗೇರಿ ಕೃಷ್ಣ ಶರ್ಮ, ದ.ರಾ.ಬೇಂದ್ರೆ, ಸಿಂಪಿ ಲಿಂಗಣ್ಣನವರೊಂದಿಗೆ ಬೀದರ ನಗರ ಸುತ್ತಿ ಬಂದಿದ್ದಾರೆ. ಇವೆಲ್ಲ ವುಗಳಿಗಿಂತ ಹೆಚ್ಚಾಗಿ ಅಂಗಹೀನಳಾದ ಹೆಣ್ಣು ಮಗಳನ್ನೆ ಒಂದು ಆದರ್ಶದ ಹುಚ್ಚಿಗಾಗಿ ಲಗ್ನವಾದರು. ಹೀಗೆ ಪಂಚಾಕ್ಷರಿ ಹೆಸರಿಗೆ ತಕ್ಕಂತೆ ಅಚ್ಚ ಶರಣ ಜೀವನ ನಡೆಸುತ್ತ ಎಲ್ಲರಿಗೂ ಮಾದರಿಯಾಗಿದ್ದಾರೆ.

ಪ್ರೊ.ವೀರೇಂದ್ರ ಸಿಂಪಿ
ವಿದ್ಯಾನಗರ, ಬೀದರ.

೧೧. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಬೀದರ ಜಿಲ್ಲಾ ಅಧ್ಯಕ್ಷರಾಗಿರುವ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಅಪರೂಪದ ವ್ಯಕ್ತಿ. ಶರಣ ಸಾಹಿತ್ಯ ಪ್ರೇಮಿ. ತಮ್ಮ ಈ ಇಳಿವಯಸ್ಸಿನಲ್ಲಿಯೂ ಕನ್ನಡದ ಸಮೃದ್ಧ ಬೆಳೆ ಬೆಳೆಸಬೇಕೆಂಬ ಮನಸ್ಸುಳ್ಳವರು. ಹಿಂದೆ ಕನ್ನಡ ನಾಡು ನುಡಿಗಾಗಿ ಹಲವಾರು ಪ್ರತಿಭಟನೆ ಹಾಗೂ ಸಭೆ ಸಮಾರಂಭಗಳಲ್ಲಿ ಸಕ್ರೀಯ ವ್ಯಕ್ತಿಯಾಗಿ ಭಾಗವಹಿಸುತ್ತಿದ್ದ ಇವರು ಈಗಲೂ ಅಂತಹ ಕಾರ್ಯಗಳಲ್ಲಿ ಎಡೆಬಿಡದೆ ಭಾಗಿಯಾಗುವ ಅವರ ಚಟುವಟಿಕೆಗಳು ಯುವಕರಿಗೆ ವಿಸ್ಮಯ ತರುವಂತಿವೆ. ಶರಣ ಸಾಹಿತ್ಯ ಕುರಿತು ಹಾಗೂ ಶರಣರ ಕುರಿತು ಅವರು ಒಳ್ಳೆಯ ಭಾಷಣ ಮಾಡುತ್ತಾರೆ. ಸಾಧ್ಯವಾದಷ್ಟು ಅವರ ಬದುಕು ಶರಣ ಸಂಸ್ಕೃತಿಯ ಬದುಕಾಗಿದೆ. ನ್ಯಾಯ ನಿಷ್ಠುರಿಯ ಪಂಚಾಕ್ಷರಿಯೂ ಯಾರಿಗೂ ಹೆದರದೆ ಪುಣ್ಯಶೆಟ್ಟಿಯಾಗಿದ್ದಾರೆ. ಅವರು ರಚಿಸಿರುವ ಬೀದರ ಜಿಲ್ಲೆಯ ಪ್ರಮುಖ ವ್ಯಕ್ತಿಗಳ ಜೀವನ ಚರಿತ್ರೆ ವಸ್ತು ನಿಷ್ಟವಾಗಿದ್ದು ಅವು ಮುಂದಿನವರಿಗೆ ಮಾದರಿಗಳಾಗಿ ನಿಂತಿವೆ.

ಪುಣ್ಯಶೆಟ್ಟಿಯವರದು ಅಧ್ಯಯನ ಶೀಲ ಮನಸ್ಸು, ಸೃಜನಶೀಲ ವ್ಯಕ್ತಿತ್ವ, ನೇರ ನುಡಿಯ ಸರಳ ನಡೆಯ ವ್ಯಕ್ತಿ. ಅನುಭಾವ ತುಂಬಿದ ಅವರ ಬದುಕು. ಆದರ್ಶತೆಗೆ ಹೆಸರುವಾಸಿಯಾಗಿ ನಿಂತಿದೆ. ಒಳ್ಳೆಯ ಕವಿ. ಉತ್ತಮ ಗದ್ಯ ರಚನೆಕಾರರೆನಿಸಿರುವ ಅವರ ಜೀವನ ಸಾಧನೆ ಕನ್ನಡ ಸಂಸ್ಕೃತಿಯ ದೃಷ್ಟಿಯಿಂದ ಅತ್ಯಂತ ಮೌಲ್ಯಯುಕ್ತವಾಗಿದೆ.

ಡಾ. ಸೋಮನಾಥ ಯಾಳವಾರ
ಹುಮನಾಬಾದ.

೧೨. ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರ ನೇತೃತ್ವದಲ್ಲಿ ಅತ್ಯುತ್ತಮ ಕಾರ್ಯ ಮಾಡುತ್ತಿದೆ. ಪ್ರತಿವರ್ಷ ಏಳೆಂಟು ಕಾರ್ಯಕ್ರಮ ಏರ್ಪಡಿಸುತ್ತಾರೆ. ಪಂಚಾಕ್ಷರಿಯವರು ೪೭ ವರ್ಷ ವಯಸ್ಸಿನ ಅತ್ಯಂತ ಉತ್ಸಾಹಿ ಕಾರ್ಯಕರ್ತರು. ವಿದ್ಯಾರ್ಥಿಯಾಗಿನಿಂದಲೂ ಜಿಲ್ಲೆಯ ಕನ್ನಡ ಚುವಟಿಕೆಯಲ್ಲಿ ಸಕ್ರಿಯ ಪಾತ್ರ ವಹಿಸುತ್ತ ಬಂದವರು. ತಮ್ಮ ಸ್ವಂತ ಕೆಲಸವನ್ನು ಮನೆಯನ್ನು ಮರೆತು ಸಾಹಿತ್ಯ ಪರಿಷತ್ತಿಗಾಗಿ ಹಗಲಿರುಳು ದುಡಿಯುವಂಥವರು.

ಬಸವರಾಜ ಕಟ್ಟಿಮನಿ
ಜನಪ್ರಗತಿ ವಾರ ಪತ್ರಿಕೆ
ಮಾರ್ಚ ೨-೨-೧೯೮೧

೧೩. ನನ್ನ ತರುಣ ಮಿತ್ರರಾದ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಬರೆದ ಚಂದ್ರಶೇಖರ ಆಜಾದ ಎಂಬ ನಾಡಕವನ್ನ ಓದಿಸಿ ಕೇಳಿದೆ. ಪ್ರತಿ ಪ್ರವೇಶದ ಸಂವಾದಗಳು ವಿವಿಧ ರೀತಿಯವಾಗಿದ್ದು ಆಕರ್ಶಕವಾಗಿವೆ. ರಂಗಭೂಮಿಯಲ್ಲಿ ಆಡಿದಾಗ ಪ್ರೇಕ್ಷಕರನ್ನ ಅವು ಉತ್ಸಾಹದಿಂದ ಹುರಿದುಂಬಿಸುವಲ್ಲಿ ಸಂಶಯವಿಲ್ಲ. ಪಂಚಾಕ್ಷರಿಯವರು ಸ್ವತಃ ವೀರರಸ ಪ್ರೀಯರು, ದೇಶಭಕ್ತರು, ಭಾಷಾ ಭಕ್ತರು, ಹೆಚ್ಚಾಗಿ ಮಾನವೀಯ ಸದ್ಗುಣಗಳನ್ನು ಮೆಚ್ಚುವವರು. ಆ ಸತ್ಯವು ಈ ಕೃತಿಯಲ್ಲಿ ಬಂದಿದೆ. ತಮ್ಮ ಭಾಗದ ಜನರಲ್ಲಿ ಸದ್ಗುಣ ವೃದ್ಧಿಯನ್ನು ಮಾಡುತ್ತ ಸದಭಿರುಚಿಯನ್ನು ಬೆಳೆಸುವಂತೆ ಇವರ ಕೃತಿಗಳಾಗಲಿ, ಇವರ ಪಂಚಾಕ್ಷರಿ ಮಂತ್ರ ಶಿವ ಸಂಕಲ್ಪ ಸಿದ್ಧಿಯಾಗಲಿ.

ದ.ರಾ.ಬೇಂದ್ರೆ.
ಸಾಧನಕೇರೆ
(ಚಂದ್ರಶೇಖರ ನಾಟಕಕ್ಕೆ ಹರಕೆ)
೧೩-೦೩-೧೯೭೩

೧೪.

ಬೀದರಿನ ಪಂಚಾಕ್ಷರಿ ಕನ್ನಡದ ಸೇನಾನಿ
ಪುಣ್ಯಶೆಟ್ಟಿಯ ಮನೆತನದ ಶಿವಮಂತ್ರದ ತೆನಿ
ವಚನ ಸಂಸ್ಕೃತಿಗೆ ಮನೆತನದ ಅಪ್ಪಟ ಬೆಸುಗೆ
ಮನೆತುಂಬ ಪುಸ್ತಗಳ ಸಾಲುಗಂಟು ಬದಿಗೆ
ಕನ್ನಡ ಪ್ರಿತಿಗೆ ಮೈ ಉಬ್ಬಿ ಕುಣಿವ ಬಂಟ
ಬರಹಗಾರರ ಬಳಗಕ್ಕೆ ಅತಿ ಹತ್ತಿರದ ನಂಟ
ಹೋರಾಟದ ಬದುಕಿಗೆ ಪ್ರೀತಿ ಅಂಟುನಂಟು
ಕನ್ನಡಕ್ಕೆ ಧಕ್ಕೆ ಬಂದರೆ ತನು-ಮನಕ್ಕೆ ಸಿಟ್ಟು

ಕನ್ನಡ ಕೂಗಿಗೆ ಇವರ ಬದುಕು ಗುಡುಗು ಮಿಂಚು
ಬಂಡಾಯದ ನಡೆಗೆ ನುಡಿಗೆ ಬಿರುಗಾಳಿಯ ರಭಸ
ಬರವಣಿಗೆ ಹದ ದುಡಿಮೆ: ಮಾತಾಡಿದ್ದೆ ಹೆಚ್ಚು
ಇವರ ನುಡಿ ಗಡಣದಿ ಉಂಟು ಕನ್ನಡದ ಕೆಚ್ಚು
ಇವರ ಅಭಿಮಾನಕ್ಕೆ ಕನ್ನಡದ ಗೆಳೆಯರ ಬಳಗ
ಪಂಚಾಕ್ಷರಿ ಹೆಸರು ಇಲ್ಲಿ ಎಲ್ಲರಿಗೆಗೊತ್ತು.

ಎಂ.ಜಿ.ಗಂಗನಪಳ್ಳಿ
ಬೀದರ.

೧೫. ಪಂಚಾಕ್ಷರಿ ಗುರುಗಳು ತಮ್ಮ ಪಾಲಿನ ಶಿಕ್ಷಕ ಕಾಯಕವನ್ನ ಶ್ರದ್ಧೆ ನಿಷ್ಠೆ ಅವಧಾನ ಭಕ್ತಿಯಿಂದ ವಿದ್ಯಾರ್ಥಿಗಳೇ ತನ್ನ ದೇವರೆಂದು, ಅವರಿಗೆ ಸರಿಯಾಗಿ ಪಾಠ ಮಾಡುವುದೇ ತಮ್ಮ ಪೂಜೆ ಎಂದು ಬಗೆದು, ಶಿಕ್ಷಿಸುವುದು. ಅಂದರೆ ಆಯಾಯ ವಿಷಯಗಳನ್ನು ವಿದ್ಯಾರ್ಥಿಗಳ ಮನ ಮುಟ್ಟುವಂತೆ ತಿಳಿಸಿಕೊಡುವುದು. ಇದೇ ಧಾರ್ಮಿಕ ಪರಿಭಾಷೆಯಲ್ಲಿ ಜಂಗಮ ಕಾಯಕ ಈ ಅರ್ಥದಲ್ಲಿ ಶ್ರೀಯುತ ಪಂಚಾಕ್ಷರಿ ಶಿಕ್ಷಕರು ಪವಿತ್ರ ಜಂಗಮ ಮೂರ್ತಿಗಳು.

ವಿ.ಸಿದ್ಧರಾಮಣ್ಣ
ಬಸವಕಲ್ಯಾಣ.

೧೬. ಪುಣ್ಯಶೆಟ್ಟಿಯವರು ಕಟ್ಟುನಿಟ್ಟಿನ ಕನ್ನಡ ಸೇವಕರು. ಯಾರಾದರು ಕನ್ನಡದ ಹೆಸರಿಗೆ ಬಂದರೆ ಅಂಜದೆ-ಅಳುಕದೆ ಕೂಡಲೆ ಪ್ರತಿಭಟಿಸುತ್ತಾರೆ. ಸಚಿವರಾದರೇನು, ಸಂಪಾದಕರಾದರೇನು ಕನ್ನಡದಲ್ಲಿ ಮಾತನಾಡುವಂತೆ ಮಾಡುತ್ತಾರೆ. 'ಕನ್ನಡವ ಕೊಲ್ಲುವ ಮುನ್ನ ಓ ನನ್ನ ಕೊಲ್ಲು' ಎನ್ನುವ ಛಲಗಾರರು. ಶರಣ ಸಾಹಿತ್ಯ ಹಾಗೂ ಕನ್ನಡ ಸಾಹಿತ್ಯ ವೆಂದರೆ ಅವರಿಗೆ ಪಂಚಪ್ರಾಣ. ಯಾವತ್ತು ಶರಣರ ವಚನಗಳನ್ನು ಮೆಲುಕು ಹಾಕುತ್ತಿರಲೇ ಇರುತ್ತಾರೆ. ಅವರ ಜೇಬಿನಲ್ಲಿ ವಚನಗಳ ಚೀಟಿಗಳೇ ತುಂಬಿರುತ್ತವೆ.

ಹಣಮಂತಪ್ಪಾ ಪಾಟೀಲ
ಬಸವನಗರ, ಬೀದರ.

## ಅಧ್ಯಾಯ - ಐದು

# ಸಂದರ್ಶನ

ನಾನು ಎಂ.ಫಿಲ್ ಸಂಶೋಧನ ಕಿರು ಪ್ರಬಂಧಕರೆಂದು ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರ ಬದುಕು-ಬರಹ ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಅವರೊಂದಿಗೆ ನೇರವಾದ ಸಂದರ್ಶನ ಮಾಡಿ ಅವರ ಬದುಕು ಬರಹದ ಬಗ್ಗೆ ಚರ್ಚಿಸಲಾಯಿತು. ಈ ಚರ್ಚೆಯಲ್ಲಿನ ಕೆಲವು ವಿಚಾರಗಳು ಈ ಮುಂದಿನಂತಿವೆ.

**ಪ್ರಶ್ನೆ ೧.ನಿಮಗೆ ಕನ್ನಡ ಸಾಹಿತ್ಯದ ಕಡೆ ಒಲವು ಮೂಡಲು ಪ್ರಭಾವಗಳಾವುವು?**

ಉತ್ತರ: ನಾನು ಚಿಕ್ಕವನಿದ್ದಾಗ ನಮ್ಮ ಗ್ರಾಮದಲ್ಲಿ ಬಸವ ಜಯಂತಿ, ಜಾತ್ರೆ ಸಂದರ್ಭದಲ್ಲಿ ಹದಿನೈದು ದಿವಸಗಳ ಕಾಲ ರಾತ್ರಿವೇಳೆ ಊರಲ್ಲೆಲ್ಲಾ ದೇವರ ಮೆರವಣಿಗೆಯಾಗುತ್ತಿತ್ತು. ಆ ಸಂದರ್ಭದಲ್ಲಿ ಭಜನೆಯ ಹಾಡುಗಳು, ಕೋಲಾಟದ ಹಾಡುಗಳು, ಕೇಳುತ್ತಿದ್ದೆ. ಇದಲ್ಲದೆ ಬೇರೆ ಬೇರೆ ಹಬ್ಬದ ದಿನಗಳಲ್ಲಿ ಸಣ್ಣಾಟ, ಬಯಲಾಟಗಳು ನಡೆಯುತ್ತಿದ್ದವು. ಬಯಲಾಟದಲ್ಲಿ ಕುಣಿತಗಳು, ಸಣ್ಣಾಟದಲ್ಲಿ ಪಾತ್ರಗಳ ನಟನೆ ನೋಡಿ ನನಗೆ ಅವರಂತೆ ನಟಿಸಬೇಕೆಂಬ, ಹಾಡಬೇಕೆಂಬ ಕುತೂಹಲ ಕೆರಳುತ್ತಿತ್ತು. ನಮ್ಮ ಕುಟುಂಬದಲ್ಲಿ ಪ್ರತಿ ಗುರುವಾರ ನಡೆಯುವ ಭಜನೆಯಲ್ಲಿ ಭಾಗವಹಿಸುತ್ತಿದ್ದೆ. ಈ ಹಾಡುಗಳ ಮಾಧುರ್ಯ ನನ್ನ ಮೇಲೆ ಪ್ರಭಾವ ಬೀರಿತು. ಇದರಂತೆಯೇ ನಾನು ಹಾಡುಗಳನ್ನು ರಚಿಸಬೇಕೆಂದು ಇಚ್ಛಿಸಿದೆ. ಅದರಂತೆಯೇ ಪ್ರಾಸಗಳಿಂದ ಕೂಡಿದ ಬಾಲ ಭಾಷೆಯಲ್ಲಿ ಹಾಡುಗಳನ್ನು ರಚಿಸುತ್ತಿದ್ದೆ. ಈ ಹಾಡುಗಳು ಅನ್ಯರು ಕೇಳಿ ಹೊಗಳಬೇಕೆಂಬ ಅಪೇಕ್ಷೆ ನನಗೆ ಇರಲಿಲ್ಲ. ನನ್ನ ಆತ್ಮ ಸಂತೋಷಕ್ಕಾಗಿ ರಚಿಸುತ್ತಿದ್ದೆನು. ಇದರಿಂದ ನಾನು ಕೂಡ ಒಬ್ಬ ದೊಡ್ಡ ಕವಿ ಇದ್ದೆನೆಂಬ ಭಾವ ಭಾಸವಾಗುತ್ತಿತ್ತು. ಈ ರೀತಿಯ ಬೆಳವಣಿಗೆಯಿಂದ ಬರುಬರುತ್ತ ಸ್ವಲ್ಪ ಹೆಚ್ಚಿನ ಪ್ರಮಾಣದ ಕವಿತೆ ಬರೆಯುತ್ತಿದ್ದೆನು. ಜಾನಪದ ಹಾಡುಗಳೇ ನನಗೆ ಸಾಹಿತ್ಯದ ಕಡೆಗೆ ಒಲವು ಮೂಡಲು ಪ್ರಭಾವ ಬೀರಿದವು.

**ಪ್ರಶ್ನೆ ೨. ಕನ್ನಡ ಸಾಹಿತ್ಯದಲ್ಲಿ ನೀವು ಜೀವನ ಚರಿತ್ರೆಯನ್ನು ಏಕೆ ಆರಿಸಿಕೊಂಡಿದ್ದೀರಿ?**

ಉತ್ತರ : ಸಾಹಿತ್ಯದಲ್ಲಿ ಅನೇಕ ಪ್ರಕಾರಗಳಿವೆ. ಕಾದಂಬರಿ, ಕಾವ್ಯ, ಪ್ರಬಂಧ, ನಾಟಕ, ಹರಟೆ ಮತ್ತು ಜೀವನ ಚರಿತ್ರೆ ಇವೆಲ್ಲ ಪ್ರಕಾರಗಳಲ್ಲಿ ನನಗೆ ಹಿಡಿಸಿದ್ದು ಜೀವನ ಚರಿತ್ರೆ. ಇದಕ್ಕೆ ಕಾರಣವೇನೆಂದರೆ ಆದರ್ಶ ವ್ಯಕ್ತಿಗಳ ಜೀವನ ಓದುವುದರಿಂದ ಓದುಗನು ಕೂಡ ಅವರಂತೆ ಮಾರ್ಪಡುತ್ತಾರೆ. ಶರಣರು ಹೇಳಿದಂತೆ ಕೀಡೆ ಕುಂಡಲಿಗನಾಗದೇ ಅಯ್ಯಾ ಅಂದರೆ ಕುಂಡಲಿಗ ಎಂದರೆ ಭ್ರಮರ. ಒಂದು ಹುಳವನ್ನು ತಂದು ತನ್ನ ಗೂಡಿನಲ್ಲಿ ಅದನ್ನು ಪೋಷಿಸಿ ತನ್ನಂತೆ ಕುಂಡಲಿಗನನ್ನಾಗಿ ಮಾಡುತ್ತದೆ ಎಂಬ ನಂಬಿಕೆ ಇದೆ. ಮಹಾತ್ಮಾ ಗಾಂಧೀಜಿಯವರು ಸತ್ಯ ಹರಿಶ್ಚಂದ್ರ ಮತ್ತು ಶ್ರವಣಕುಮಾರನ ಚರಿತ್ರೆಯನ್ನು ಬಾಲ್ಯದಲ್ಲಿ

ಓದಿದ್ದರಿಂದ ತಾನು ಸತ್ಯ ಹರಿಶ್ಚಂದ್ರನಂತೆ ಸತ್ಯದ ಆರಾಧಕನಾಗಬೇಕೆಂದು ನಿಶ್ಚಯಿಸಿದರು. ಅದರಂತೆ ಅವರು ಸತ್ಯ ಅಹಿಂಸೆಯ ಆರಾಧಕರಾಗಿ ಬ್ರಿಟಿಷ್ ಸಾಮ್ರಾಜ್ಯವನ್ನು ಭಾರತದಿಂದ ಓಡಿಸಿದರು.

ಮಕ್ಕಳಿಗೆ ಬಾಲ್ಯದಿಂದಲೆ ಮಹಾತ್ಮರ, ಸಂತರ, ದೇಶಭಕ್ತರ ಚರಿತ್ರೆ ಓದುವ ಹವ್ಯಾಸವನ್ನು ಬೆಳೆಸಿದರೆ ಹುಡುಗರಲ್ಲಿ ಶಿಸ್ತು, ಸಂಯಮ, ದೇಶಭಕ್ತಿ ಮುಂತಾದ ಸದ್ಗುಣಗಳು ಬೆಳೆಯುವಲ್ಲಿ ಸಂದೇಹವಿಲ್ಲ. ಆದರೆ ಇಂದಿನ ಕಾಲದಲ್ಲಿ ಮಕ್ಕಳಿಗೆ ಚರಿತ್ರೆ ಓದುವ ಹವ್ಯಾಸವಿರದ ಕಾರಣ ವಿದ್ಯಾರ್ಥಿಗಳಲ್ಲಿ ಸ್ವೆಚ್ಛಾಚಾರ ವೃತ್ತಿ ಹೆಚ್ಚಾಗಿದೆ. ಇದರ ನಿವಾರಣೆಯಾಗಬೇಕಾದರೆ ಮಕ್ಕಳಿಗೆ ಜೀವನ ಚರಿತ್ರೆ ಓದುವಂತೆ ಪ್ರೇರೇಪಿಸಬೇಕು.

**ಪ್ರಶ್ನೆ ೩. ನೀವು ಕನ್ನಡದ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದಾಗ ಅನೇಕ ಸಾಹಿತಿಗಳ ಸಂಗ ದೊರೆತಿದೆ. ಅವರಲ್ಲಿ ಕೆಲವರ ಪ್ರಭಾವವನ್ನು ತಿಳಿಸಿರಿ.**

ಉತ್ತರ : ಕನ್ನಡದ ಚಟುವಟಿಕೆಗಳಲ್ಲಿ ಭಾಗವಹಿಸುವುದೆಂದರೆ ನಗೆ ಬಲು ಆನಂದ. ಬೀದರನಲ್ಲಿರುವಾಗ ಕೆಲವೇ ಕೆಲವು ಸಾಹಿತಿಗಳ ಸಂಪರ್ಕ ನನಗೆ ದೊರೆಯಿತು ಅವರಲ್ಲಿ ಮುಖ್ಯರೆಂದರೆ ವಸಂತಾಚಾರ್ಯ ಕುಪ್ಪಗಿ, ಪಿ.ಎಂ. ಗಲಗಲಿಯವರು. ಸಾಹಿತ್ಯ ಚಟುವಟಿಕೆಗಳು ಹೆಚ್ಚಿನ ಪ್ರಮಾಣದಲ್ಲಿ ಧಾರವಾಡದಲ್ಲಿ ಜರುಗುತ್ತವೆಂಬುದನ್ನು ನನಗೆ ಗೊತ್ತಿತ್ತು. ಏಕೆಂದರೆ ಧಾರವಾಡವು ಸಾಹಿತಿಗಳ ಕಾಶಿ ಎಂದು ಹೆಸರು ಪಡೆದಿದೆ. ಧಾರವಾಡಕ್ಕೆ ವ್ಯಾಯಾಮ ಶಿಕ್ಷಕ ತರಬೇತಿಗಾಗಿ ಒಂದು ವರ್ಷದ ಮಟ್ಟಿ ಗೆ ಹೋಗಿದ್ದೆನು. ವ್ಯಾಯಾಮ ಶಿಕ್ಷಕನಾಗುವಲ್ಲಿ ನನಗೆ ಆಸಕ್ತಿ ಇರಲಿಲ್ಲ, ಪ್ರವೃತ್ತಿಯಲ್ಲಿ ಸಾಹಿತ್ಯದ ಆರಾಧಕನಾದ ನಾನು ಇಂಥಹ ಸೂ ಅವಸರ ನನಗೆ ಧಾರಾವಾಡದಲ್ಲಿ ದೊರೆಯಿತು. ಇಲ್ಲಿ ನನಗೆ ಬೆಟಗೇರಿ ಕೃಷ್ಣಶರ್ಮರ ಸಂಗ ದೊರಕಿದ್ದು ಸುದೈವವೆಂದು ಹೇಳಬೇಕು. ಅವರೊಡನೆ ಚರ್ಚಿಸುವಾಗ ಬಹಳಷ್ಟು ಸಾಹಿತ್ಯದ ಬಗ್ಗೆ ಪರಿಚಯ ನನಗಾಯಿತು. ಆಗಾಗ ಸಾಧನಕೇರಿಯಲ್ಲಿರುವ ವರಕವಿ ಬೇಂದ್ರೆಯವರ ಮನೆಗೆ ಹೋಗುತ್ತಿದ್ದೆನು ಅವರು ನನ್ನ ಮೇಲೆ ಅತೀಶಯವಾದ ಪ್ರಭಾವವನ್ನ ಬೀರಿದರು ಮತ್ತು ಸಾಹಿತ್ಯದ ಸವಿಯನ್ನು ಉಣಿಸಿದರು.

ಮುಂದೆ ಬೆಂಗಳೂರಿನಲ್ಲಿ ಬಿ.ಪಿ.ಎಡ್ ತರಬೇತಿಗಾಗಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಹೋದೆನು. ವಿಶ್ವವಿದ್ಯಾಲಯದ ಕನ್ನಡ ಚಟುವಟಿಕೆಗಳಲ್ಲಿ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದೆನು. ಉಪನ್ಯಾಸಕ್ಕಾಗಿ ಆಗಮಿಸಿದ ಅನೇಕ ಸಾಹಿತ್ಯ ದಿಗ್ಗಜರು ನನ್ನ ಮೇಲೆ ಪ್ರಭಾವ ಬೀರಿದರು. ಅವರಲ್ಲಿ ಮುಖ್ಯರೆಂದರೆ, ತೀ. ತಾ. ಶರ್ಮ, ಅವರ ಮಗ ಶ್ರೀರಂಗ, ಚಿದಾನಂದ ಮೂರ್ತಿ ಮುಂತಾದವರು. ಈ ಮಹನೀಯರು ನನ್ನಲ್ಲಿ ಸಾಹಿತ್ಯ ಬೀಜವನ್ನು ಚಿಗುರೊಡೆಯುವಂತೆ ಉಸಕರಿಸಿದರು.

**ಪ್ರಶ್ನೆ ೪. ಇಂದಿನ ಶಿಕ್ಷಣ ವ್ಯವಸ್ಥೆಯ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ಉತ್ತರ: ಇಂದಿನ ಶಿಕ್ಷಣಕ್ಕೂ ಹಿಂದಿನ ಶಿಕ್ಷಣಕ್ಕೂ ಬಹಳ ವ್ಯತ್ಯಾಸ ಉಂಟಾಗಿದೆ. ಮೊದಲಿನ ಶಿಕ್ಷಕರು ಪ್ರಮಾಣಿಕತನದಿಂದ ಮಕ್ಕಳಿಗೆ ಪಾಠ ಹೇಳುತ್ತಿದ್ದರು. ವಿದ್ಯಾರ್ಥಿಗಳ ಬಗ್ಗೆ ಹೆಚ್ಚಿನ ಕಾಳಜಿ ಇರುತಿತ್ತು,

ವಿದ್ಯಾರ್ಥಿಗಳ ಸುಖಃ ದುಃಖ ತಮ್ಮದೆ ಎಂದು ಭಾವಿಸುತ್ತಿದ್ದರು. ಜಾತಿಯ ಭಾವನೆ ಇರಲಿಲ್ಲ. ಮಕ್ಕಳ ಮನಸ್ಸಿಗೆ ತಟ್ಟುವಂತೆ ಶಾಲೆಯಲ್ಲಿ ಬೋಧಿಸುತ್ತಿದ್ದರು. ವಿದ್ಯಾರ್ಥಿಗಳು ಕೂಡ ಶಿಕ್ಷಕರ ಬಗ್ಗೆ ಆದರ ಗೌರವ ಉಳ್ಳವರಾಗಿದ್ದರು. 'ಆಚಾರ್ಯ ದೇವೋಭವ' ಎಂದು ಭಾವಿಸುತ್ತಿದ್ದರು. ಆದರೆ ಇಂದಿನ ವಾತಾವರಣ ಶಿಕ್ಷಕರು ಮತ್ತು ಮಕ್ಕಳಲ್ಲಿ ಬಿರುಕು ಮೂಡಿಸಿದೆ. ಜಾತಿಯ ಭಾವನೆ ಬೆಳೆದಿದೆ. ವಿದ್ಯಾರ್ಥಿ ಮತ್ತು ಶಿಕ್ಷಕರಲ್ಲಿ ಪ್ರೇಮವಿಲ್ಲ. ಈ ಕಾರಣದಿಂದ ಈಗಿನ ಶಿಕ್ಷಣಕ್ಕಿಂತ ಹಿಂದಿನ ಶಿಕ್ಷಣ ಬಹಳ ಶ್ರೇಷ್ಠಮಟ್ಟದ್ದಾಗಿತೆಂದು ನನ್ನ ಭಾವನೆ. ಈಗಿನ ಶಿಕ್ಷಣ ದುಡಿದವರಿಗೆ ಮಾತ್ರ ಮುಂದೆ ಬರಲು ಅನುಕೂಲ ಮಾಡಿಕೊಟ್ಟಿದೆ. ಬಡವರು, ದುರ್ಬಲರು ತಾಂತ್ರಿಕ ಶಿಕ್ಷಣದಿಂದ ಬಹುದೂರ ಉಳಿದಿದ್ದಾರೆ.

**ಪ್ರ೫. ರಾಜ್ಯ ಮತ್ತು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ಉತ್ತರ: ರಾಜ್ಯ ಮತ್ತು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಬಗ್ಗೆ ನನ್ನ ಅಭಿಪ್ರಾಯ ಕೆಳಗಿನಂತಿದೆ. ಬೀದರ ಜಿಲ್ಲೆಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರನ್ನು ಮೊದಲು ರಾಜ್ಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ನಾಮಕರಣ ಮಾಡುತ್ತಿದ್ದರು. ಯೋಗ್ಯರಾದವರನ್ನು ಸರ್ವಾನುಮತದಿಂದ ಸರ್ವರ ಅಭಿಪ್ರಾಯದಂತೆ ನೇಮಿಸುತ್ತಿದ್ದರು ಚುನಾವಣೆಗಳಿರಲಿಲ್ಲ. ಸದಸ್ಯರ ಸಂಖ್ಯೆ ಕಡಿಮೆ ಇತ್ತು. ಅಭಿರುಚಿಯುಳ್ಳವರಿಗೆ ಮಾತ್ರ ಆಯ್ಕೆಗೊಳ್ಳುತ್ತಿದ್ದರು. ಇವರು ತನು-ಮನ-ಧನದಿಂದ ಕನ್ನಡ ತಾಯಿಕ ಸೇವೆ ಮಾಡುತ್ತಿದ್ದರು. ಇದರಿಂದ ಬಹಳಷ್ಟು ಕಾರ್ಯಕ್ರಮಗಳು ಜರಗುತ್ತಿದ್ದವು. ಪರಸ್ಪರ ಕನ್ನಡಿಗರಲ್ಲಿ ಗುಂಪುಗಾರಿಕೆ ಇರಲಿಲ್ಲ. ಸರ್ವರು ಒಂದೇ ಮನಸ್ಸಿನಿಂದ ಕೆಲಸದಲ್ಲಿ ಭಾಗವಹಿಸುತ್ತಿದ್ದರು. ಆದರೆ ಈಗ ನಾಮಕರಣಗೊಂಡವರು ಆಯ್ಕೆಯಾಗುತ್ತಿಲ್ಲ. ಸದಸ್ಯರ ಸಂಖ್ಯೆ ಹೆಚ್ಚಿದೆ. ಮೂರು ವರ್ಷಗಳಿಗೊಮ್ಮೆ ಚುನಾವಣೆಗಳಾಗುತ್ತವೆ. ಲಕ್ಷಗಟ್ಟಲೆ ಹಣ ಇದ್ದವರು ಮಾತ್ರ ಚುನಾವಣೆಯಲ್ಲಿ ಆರಿಸಿ ಬರುತ್ತಾರೆ. ಸಾಹಿತ್ಯ ಪರಿಷತ್ತಿನ ಸದಸ್ಯರಾದವರು ಬಹಳಷ್ಟು ಜನ ಕನ್ನಡ ಭಾಷೆ ಬಾರದವರು, ಕನ್ನಡದ ಅಭಿಮಾನ ಇಲ್ಲದವರು ಮತ್ತು ಸಾಹಿತ್ಯದ ಗಂಧವಿಲ್ಲದವರು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರನ್ನಾಗಿ ಆಯ್ಕೆ ಮಾಡುತ್ತಾರೆ. ಇದರ ಕಾರಣ ಎಂಥವರು ಕೂಡ ಚುನಾವಣೆಯಲ್ಲಿ ಗೆದ್ದು ಬರುತ್ತಾರೆ. ಸಾಹಿತಿಗಳಲ್ಲಿ ಗುಂಪುಗಾರಿಕೆ ಮಾಡುತ್ತಾರೆ. ಯೋಗ್ಯರಾದ ಸಾಹಿತಿಗಳಿಗೆ ಸ್ಥಾನಮಾನ ಕೊಡದೆ ತಮಗೆ ಬೇಕಾದವರನ್ನು ಗೌರವಿಸುತ್ತಾರೆ. ಇದರಿಂದ ಪರಿಷತ್ತು ತನ್ನ ಉದ್ದೇಶ ಈಡೇರಿಸುವಲ್ಲಿ ವಿಫಲವಾಗುತ್ತದೆ. ಇದರಂತೆಯೇ ರಾಜ್ಯ ಮಟ್ಟದಲ್ಲಿ ಚುನಾವಣೆ ಇದೆ ರೀತಿ ನಡೆದಿದೆ. ಹಿಂದಿನ ಅಧ್ಯಕ್ಷರು ಮಾಡಿದ ಕೆಲಸಗಳು ಮುಂದೆ ಬಂದ ಅಧ್ಯಕ್ಷರುಗಳು ಅವರಷ್ಟು ಯಶಸ್ವಿ ಕೆಲಸ ಮಾಡುವಷ್ಟು ಸಮರ್ಥರಿಲ್ಲ ಎಂಬುದು ನನ್ನ ಅನಿಸಿಕೆ.

**ಪ್ರಶ್ನೆ ೬. ಅಮೇರಿಕಾದಲ್ಲಿ ನಡೆಯುತ್ತಿರುವ ಅಕ್ಕ ಕನ್ನಡ ಸಮ್ಮೇಳನದ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ಉತ್ತರ : ಕನ್ನಡಿಗರು ಅಭಿಮಾನ ಧನರು, ಸ್ವಾಭಿಮಾನಿಗಳು ಎಂದು ಪೂರ್ವದ ಕವಿಗಳು ಹೇಳಿದ ಮಾತನ್ನು ಅಮೇರಿಕಾದಲ್ಲಿ ವಾಸಿಸುವ ಕನ್ನಡಿಗರು ಸಾಧಿಸಿ ತೋರಿಸಿದ್ದಾರೆ. ಅಕ್ಕ ಕನ್ನಡ ಸಮ್ಮೇಳನ ಅಮೇರಿಕಾದಲ್ಲಿ ನಡೆಯುತ್ತಿರುವುದು ಕನ್ನಡಿಗರಾದ ನಮಗೆ ಕೇಳಿ ಕುಣಿದಾಡುವಂತೆ ಮಾಡಿದೆ. 'ಎಲ್ಲಾದರೂ ಇರು

ಎಂತಾದರೂ ಇರು ಎಂದೆಂದಿಗೂ ನೀ ಕನ್ನಡವಾಗಿರು' ಎಂಬ ಕವಿವಾಣಿ ಸಾರ್ಥಕವಾಗಿದೆ. ಕರ್ನಾಟಕದಲ್ಲಿಯ ಕಲಾವಿದರು, ಪಂಡಿತರು ಮುಂತಾದವರನ್ನು ಆಹ್ವಾನಿಸಿ ಅಮೇರಿಕಾದ ಕನ್ನಡಿಗರು ತಮ್ಮ ಕನ್ನಡತನವನ್ನ ಉಳಿಸಿಕೊಳ್ಳಲು ಹವಣಿಸುತ್ತಿರುವುದು ಎಲ್ಲರಿಗೂ ರೋಮಾಂಚನ ಉಂಟುಮಾಡಿದೆ.

**ಪ್ರ ೭. ಕನ್ನಡ ಶಾಸ್ತ್ರೀಯ ಭಾಷೆ ಸ್ಥಾನಮಾನ ಕುರಿತು ನಿಮ್ಮ ಅನಿಸಿಕೆಗಳೇನು?**

ಉತ್ತರ: ದ್ರಾವಿಡ ಭಾಷೆಯು ಬಹಳ ಪುರಾತನವಾದ ಭಾಷೆ, ಈ ಭಾಷೆಗೆ ಎರಡು ಸಾವಿರ ವರ್ಷಗಳ ಇತಿಹಾಸವಿದೆ. ದ್ರಾವಿಡ ಭಾಷೆಯಲ್ಲಿ ಕನ್ನಡ, ತೆಲುಗು, ತಮಿಳು ಮಲೆಯಾಳಿ ಭಾಷೆಗಳು ವರುತ್ತವೆ. ಇವು ನಾಲ್ಕು ಭಾಷೆಗಳು ಸಹೋದರ ಭಾಷೆಗಳಾಗಿವೆ. ಕೇಂದ್ರ ಸರ್ಕಾರವು ತಮಿಳರ ಒತ್ತಾಯಕ್ಕೆ ಮಣಿದು ತಮಿಳು ಭಾಷೆಗೆ ಶಾಸ್ತ್ರೀಯ ಸ್ಥಾನಮಾನವನ್ನು ನೀಡಿದೆ. ಆ ಭಾಷೆಯಷ್ಟೆ ಪುರಾತನವಾದ ಕನ್ನಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ನೀಡಿಲ್ಲ. ಹೀಗೆ ಕೇಂದ್ರ ಸರ್ಕಾರವು ಒಂದು ಕಣ್ಣಿಗೆ ಬೆಣ್ಣೆ ಮತ್ತೊಂದು ಕಣ್ಣಿಗೆ ಸುಣ್ಣ ಬಳಿಯುವ ಕೆಲಸ ಮಾಡುತ್ತಿದೆ. ಕನ್ನಡಿಗರು ದುರ್ಬಲರು ಎಂಬ ಭಾವನೆ ಕೇಂದ್ರದವರಲ್ಲಿ ಇರುವ ಕಾರಣದಿಂದಲೇ ಕನ್ನಡಕ್ಕೆ ಶಾಸ್ತ್ರೀಯ ಸ್ಥಾನ-ಮಾನ ಕೊಡುತ್ತಿಲ್ಲ. ನಮ್ಮ ಸಾಹಿತಿಗಳು ಕೇಂದ್ರ ಸರ್ಕಾರದ ಧೋರಣೆ ವಿರುದ್ಧವಾಗಿ ಪ್ರತಿಭಟಿಸುತ್ತಲಿದ್ದಾರೆ ಆದರೆ ರಾಜಕೀಯ ಮುಖಂಡರು ಕನ್ನಡಿಗರಿಂದ ಮತ ಪಡೆದು ಕನ್ನಡದ ಕೆಲಸ ಮಾಡುತ್ತಿಲ್ಲ. ಇದು ಬಹಳ ಖೇದದ ಸಂಗತಿಯಾಗಿದೆ.

**ಪ್ರ. ೮. ೯ನೇ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದಾಗಿನ ನಿಮ್ಮ ಅನುಭವಗಳೇನು?**

ಉತ್ತರ: ಕನ್ನಡ ಸಾಹಿತ್ಯ ರಚಿಸುವಷ್ಟೆ ಮಹತ್ವ ಈ ಭಾಗದಲ್ಲಿ ಕನ್ನಡ ಭಾಷೆ ಮತ್ತು ಪ್ರದೇಶವನ್ನು ಉಳಿಸುವುದಾಗಿದೆ. ಆದರೆ ಸಾಹಿತ್ಯ ಪರಿಷತ್ತಿನವರು ಸಾಹಿತಿಗಳಿಗೆ ಹೆಚ್ಚಿನ ಮಹತ್ವ ಕೊಟ್ಟು ಅವರನ್ನ ಸಮ್ಮೇಳನದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡುತ್ತಾರೆ. ಆದರೆ ಕನ್ನಡದ ಸೇವೆ ಮಾಡುವವರನ್ನು ಕಡೆಗಣಿಸುತ್ತಿದ್ದಾರೆ. ಕನ್ನಡ ಸಾಹಿತ್ಯ ರಚಿಸಿರುವವರಿಗಿದ್ದಷ್ಟೆ ಸ್ಥಾನಮಾನ ಕನ್ನಡ ಹೋರಾಟಗಾರರಿಗೆ ಲಭಿಸಬೇಕೆಂದು ನನ್ನ ಅನಿಸಿಕೆಯಾಗಿದೆ.

ಈ ನಿಟ್ಟಿನಲ್ಲಿ ನನಗೆ ೯ ನೇ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದುದು ಇಲ್ಲಿಯ ಕನ್ನಡ ಹೋರಾಟಗಾರರಿಗೆ ಸಂತೋಷವಾಗಿರುವುದನ್ನು ನಾನು ಪತ್ರಿಕೆಯ ಮೂಲಕ ಕಂಡುಕೊಂಡೆನು. ಈ ವಿಷಯದಲ್ಲಿ ನಾನು ಬೀದರ ಜಿಲ್ಲೆ ಕನ್ನಡ ಸಾಹಿತ್ಯ ಪರಿಷತ್ತಿನ ಪದಾಧಿಕಾರಿಗಳಿಗೆ ಕೃತಜ್ಞತೆ ಅರ್ಪಿಸುತ್ತೇನೆ. ಹಿಂದೆ ಜರುಗಿದ ೮ ಜಿಲ್ಲಾ ಸಮ್ಮೇಳನಗಳು ಮತ್ತು ಮೊದಲಿನ ಎರಡು ಅಖಿಲ ಭಾರತ ಕನ್ನಡ ಸಾಹಿತ್ಯ ಸಮೇಳನಗಳು ೯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಷ್ಟು ಅದ್ದೂರಿಯಾಗಿ ನಡೆದಿಲ್ಲ ಎಂದು ನನಗೆ ಅನಿಸಿದೆ. ಡಾ. ಜಗನಾಥ ಹೆಬ್ಬಾಳೆಯವರು ಹಾಗು ಅವರ ಸಂಗಡಿಗರು ೪-೭ ತಿಂಗಳುಗಳ ಕಾಲ ಅಹೋರಾತ್ರಿ ಶ್ರಮವಹಿಸಿ ಈ ಕಾರ್ಯಕ್ರಮ ಯಶಸ್ವಿಯಾಗಿಸುವಂತೆ ಮಾಡಿದ್ದಾರೆ.

ಇಂತಹ ಗೌರವ ನನಗೆ ಮುಂದಿನ ಜನ್ಮದಲ್ಲಿ ದೊರಕುವುದು ಅಸಾಧ್ಯವೆಂದು ನನಗೆ ಅನಿಸಿತು. ಕನ್ನಡಕ್ಕಾಗಿ ಕೈ ಎತ್ತು ನಿನ್ನ ಕೈ ಕಲ್ಪವೃಕ್ಷ ವಾಗುತ್ತದೆ ಎಂಬ ಕವಿವಾಣಿ ಸತ್ಯವಾಗಿ ಮಾರ್ಪಟ್ಟಿದೆ.

**ಪ್ರ.೯. ಬೀದರ ಜಿಲ್ಲೆಯ ಯುವ ಜನಾಂಗಕ್ಕೆ ಮತ್ತು ಯುವ ಬರಹಗಾರರಿಗೆ ನಿಮ್ಮ ಸಂದೇಶವೇನು?**

ಉತ್ತರ: 'ವೀರಭೋಗೆ ವಸುಂಧರಾ' ಎಂದರೆ ವೀರರೇ ದೇಶವನ್ನು ಆಳಬಲ್ಲರು ಎಂದರ್ಥ. ನಾವು ವೀರರಾಗಬೇಕಾದರೆ ಆರೋಗ್ಯ ವಂತರಾಗಿರಬೇಕು. ದೃಢವಾದ ಶರೀರದಲ್ಲಿ ದೃಢವಾದ ಆತ್ಮವಿರುತ್ತದೆ. ಆದರೆ ಇಂದಿನ ಯುವ ಜನಾಂಗ ದುರ್ವ್ಯಸನಗಳಿಂದ ದುರ್ಬಲರಾಗುತ್ತಿರುವುದು ನಾವು ಕಾಣುತ್ತಿದ್ದೇವೆ. ರಾಷ್ಟ್ರದ ಬಗ್ಗೆ ಚಿಂತನೆ ಮಾಡಬೇಕು ನಮ್ಮ ದೇಶದಲ್ಲಿ ದೇಶ ಭಕ್ತಿ ಕಡಿಮೆಯಾಗುತ್ತಿರುವುದರಿಂದ ದೇಶದ್ರೋಹಿಗಳ ಸಂಖ್ಯೆ ಬೆಳೆಯುತ್ತಿದೆ. ಇವುಗಳ ದಮನ ಮಾಡಬೇಕಾದರೆ ಯುವಕರು ಸದಾಚಾರಿಗಳಾಗಿ ತಮ್ಮ ಬದುಕು ಸಾಗಿಸಿದರೆ ನಮ್ಮ ದೇಶ ಜಗತ್ತಿನ ನಕಾಶೆಯಲ್ಲಿ ಎದ್ದು ಕಾಣುವುದರಲ್ಲಿ ಸಂದೇಹವಿಲ್ಲ.

ಎರಡನೆಯದಾಗಿ ಸಾಹಿತಿಗಳಿಗೆ ಸಂದೇಶ ನೀಡುವಷ್ಟು ನಾನು ಸಮರ್ಥನಿಲ್ಲ ಆದರೆ ಸರ್ವಜ್ಞ ಕವಿಯು ಈ ರೀತಿಯಾಗಿ ಹೇಳುತ್ತಾರೆ-

ಓದಿದ ಓದುತಾ ಮೇದ ಕಬ್ಬಿನ ಸಿಪ್ಪೆ
ಓದಿನ ಒಡಲನ್ನರಿದರೆ ಸಿಪ್ಪೆ ಕಬ್ಬಾದಂತೆ ಸರ್ವಜ್ಞ

ಎಂದು ಹೇಳಿದ್ದಾರೆ. ಸಾಹಿತ್ಯವು ಒಂದು ಸಲ ಓದಿ ಎಸೆಯುವ ಸಾಹಿತ್ಯವಾಗಬಾರದು, ಎಷ್ಟು ಸಲ ಓದಿದರು ಮತ್ತೆ ಮತ್ತೆ ಓದುವಂತಹ ಸಾಹಿತ್ಯ ರಚಿಸಬೇಕು. ಇಂತಹ ಸಾಹಿತ್ಯ ಇಂದಿನ ಕಾಲಮಾನದಲ್ಲಿ ದೊರಕುತ್ತಿಲ್ಲ. ಕೆಲವರು ಮಾತ್ರ ಒಳ್ಳೆಯ ಸಾಹಿತ್ಯ ರಚಿಸುತ್ತಿದ್ದಾರೆ. ಹೆಚ್ಚಿನ ಸಾಹಿತ್ಯವು ಭೂಸಾ ಸಾಹಿತ್ಯವಾಗಿ ಪರಿಣಮಿಸುತ್ತಿದೆ. ಆಳವಾದ ಅಧ್ಯಯನ ಮತ್ತು ಚಿಂತನವಿಲ್ಲದೆ ಸಾಹಿತ್ಯ ರಚಿಸಿದರೆ ಇಂತಹ ಸಾಹಿತ್ಯ ರಚನೆಯಾಗುವುದು. ಕಾರಣ ಯುವಕರು ಓದುವುದನ್ನ ಹೆಚಿಸಿಕೊಳ್ಳಬೇಕು ಮತ್ತು ಹಿರಿಯ ವಿದ್ವಾಂಸರ ಮಾರ್ಗದರ್ಶನ ಪಡೆಯಬೇಕು ಮಹಾನುಭಾವರಿಂದ ಜ್ಞಾನಾಜ್ಞೆ ಹುಟ್ಟುವುದು ಎಂದು ಬಸವಣ್ಣನವರು ಉದ್ಗರಿಸಿದ್ದಾರೆ. ಯುವ ಸಾಹಿತಿಗಳು ಒಗ್ಗಟ್ಟಾಗಿ ಪರಸ್ಪರ ಸಹಕರಿಸಿ ಸಾಹಿತ್ಯ ರಚಿಸಬೇಕು. ಈ ನಿಟ್ಟಿನಲ್ಲಿ ಯುವ ಬರಹಗಾರರು ಮುನ್ನಡೆಯಬೇಕು.

**ಪ್ರ.೧೦. ನಿಮ್ಮ ಮುಂದಿನ ಧ್ಯೇಯ ಉದ್ದೇಶಗಳೇನು?**

ಉತರ: ಬೀದರ ಜಿಲ್ಲೆಯ ಸಂತರು ಶರಣರು ಪ್ರತಿಯೊಂದು ಊರಿನಲ್ಲಿ ಆಗಿಹೋಗಿದ್ದಾರೆ. ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮ ತನು-ಮನ-ಧನವನ್ನು ಅರ್ಪಿಸಿದ ರಾಷ್ಟ್ರ ವೀರರ ಸಂಖ್ಯೆ ಬೀದರ ಜಿಲ್ಲೆಯಲ್ಲಿ ಬಹಳಷ್ಟಿದೆ. ಇಂಥವರ ಬಗ್ಗೆ ದೃಷ್ಟಿ ಬಹಳಷ್ಟು ಜನರದ್ದು ಕಾಣಬರುತ್ತಿಲ್ಲ ಇದರ ಹೊರತಾಗಿ ಧನವಂತರ ಮತ್ತು ದೇಶ ಭಕ್ಷಣೆ ಮಾಡಿದವರ ಬಣ್ಣನೆ ಹೆಚ್ಚು ಕಾಣುತ್ತೇವೆ ಇಂತಹ ಎಲೆಯ ಮರೆಯ ಹೂವಿನಂತಿರುವ ಪವಿತ್ರ ಜೀವಿಗಳನ್ನ ಕುರಿತು ಚಿಕ್ಕ ಚಿಕ್ಕ ಪುಸ್ತಕ ಬರೆದು ನನ್ನ ಜೀವನವನ್ನು ಸಾರ್ಥಕ ಪಡಿಸಿಕೊಳ್ಳಬೇಕೆಂಬುದೆ ನನ್ನ ಧ್ಯೆಯ ಉದ್ದೇಶವಾಗಿದೆ.

# ಅಧ್ಯಾಯ - ಆರು

## ಸಮಾರೋಪ

ಕನ್ನಡ ಸಾಹಿತ್ಯಕ್ಕೆ ೧೫೦೦ ವರ್ಷಗಳ ಇತಿಹಾಸವಿದೆ. ಪ್ರಾಚೀನ ಕಾಲದಿಂದಲೂ ಅನೇಕ ಲೇಖಕರು ಕನ್ನಡದಲ್ಲಿ ಕೃತಿಗಳನ್ನು ರಚಿಸುವ ಮೂಲಕ ಕನ್ನಡ ಸಾಹಿತ್ಯವನ್ನ ಉಳಿಸಿಕೊಂಡು ಬಂದಿದ್ದಾರೆ. ಅಂತಹ ಮಹನೀಯರಲ್ಲಿ ಶ್ರೀ ಪಂಚಾಕ್ಷರಿ ಪುಣ್ಯ ಶೆಟ್ಟಿಯವರು ಒಬ್ಬರು. ಇವರು ಕನ್ನಡ ಹೋರಾಟಗಾರ ಮತ್ತು ಜೀವನ ಚಿತ್ರಕಾರರೆಂದೆ ಹೆಸರುವಾಸಿಯಾಗಿದ್ದಾರೆ. ಬೀದರ ಜಿಲ್ಲೆಯಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ರಜಾಕಾರರ ಹಾವಳಿಯಿಂದ ಕಣ್ಮರೆಯಾಗುವ ಸಂದರ್ಭದಲ್ಲೂ ಕನ್ನಡವನ್ನ ಪ್ರಜ್ವಲಿಸುವಂತೆ ಮಾಡಿದವರಲ್ಲಿ ಇವರು ಒಬ್ಬರು.

ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿ ಅವರ ಜೀವನ, ಶಿಕ್ಷಣ, ವೃತ್ತಿ ಹಾಗೂ ಸಾಹಿತ್ಯದ ಬಗ್ಗೆ ಅವರೊಡನೆ ಸಂದರ್ಶನ ಕೈಗೊಂಡಾಗ ಅವರ ಜೀವನ ಸಾಹಸಮಯವಾಗಿದೆ ಎಂದು ತಿಳಿದು ಕೊಂಡೆನು. ಅವರು ಪರರ ದುಃಖದಲ್ಲೂ ಆದಷ್ಟು ಸಹಾಯ ಮಾಡುವವರಾಗಿದ್ದಾರೆ. ಅವರ ಕೌಟುಂಬಿಕ ಜೀವನ ಬಗ್ಗೆ ತಿಳಿದುಕೊಳ್ಳುವಾಗ ರೋಮಾಂಚನವಾಯಿತು. ಅವರು ಅಂಗಹೀನ ಮಹಿಳೆಯನ್ನು ಮದುವೆಯಾದ ಸಂದರ್ಭ ಅವರ ಆದರ್ಶ ಜೀವನವನ್ನು ಪ್ರತಿಬಿಂಬಿಸುತ್ತದೆ. ಇಂದಿನ ಕಾಲದ ಯುವ ಜನಾಂಗಕ್ಕೆ ಅವರ ಆದರ್ಶಗಳು ದಾರಿ ದೀಪವಾಗಿವೆ. ಅವರ ಕನ್ನಡ ಸೇವೆಯನ್ನ ಕಂಡಾಗ ಮಹಾಕವಿ ಕುವೆಂಪುರವರ ಕನ್ನಡಕ್ಕೆ ಹೋರಾಡು ಕನ್ನಡದ ಕಂದ ಎಂಬ ಹಾಡು ಜ್ಞಾಪಕಕ್ಕೆ ಬರುತ್ತದೆ. ಇವರು ವಿದ್ಯಾರ್ಥಿ ಜೀವನದಿಂದಲೆ ಕನ್ನಡದ ಬಗ್ಗೆ ಕಾಳಜಿಯನ್ನ ಹೊಂದಿದ್ದರೆಂದು ತಿಳಿದು ಬರುತ್ತದೆ.

ಸುಮಾರು ೧೯೫೦ ರ ಸಂದರ್ಭದಲ್ಲಿ ಈ ಭಾಗದಲ್ಲಿ ಮರಾಠಿ ಉರ್ದು ಭಾಷೆಗಳೆ ಮೆರೆಯುತ್ತಿದ್ದವು. ಅಂತಹ ಸಂದರ್ಭದಲ್ಲಿ ವಿದ್ಯಾರ್ಥಿಯಾಗಿರುವಾಗಲೇ ಸಭೆ ಸಮಾರಂಭಗಳಲ್ಲಿ ಕನ್ನಡದಲ್ಲಿ ಕವನಗಳನ್ನು ಕಟ್ಟಿ ಹಾಡಿದ್ದರು. ಅದಲ್ಲದೆ ಎಲ್ಲರನ್ನ ಹಾಡಲು ಪ್ರೇರೇಪಿಸಿದರು.

ಶ್ರೀ ಪಂಚಾಕ್ಷರಿಯವರು ಶಿಕ್ಷಕರಾಗಿರುವಾಗ ಕೇವಲ ಶಿಕ್ಷಕರಾಗಿರದೆ, ಹರಿಜನರ ಸೇವೆಯು ಮಾಡಿದ್ದಾರೆ. ವಿದ್ಯಾರ್ಥಿಗಳಿಲ್ಲದ ಅಸ್ಪೃಶ್ಯತೆಯನ್ನ ಹೋಗಲಾಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಇಂತಹ ಸಂದರ್ಭದಲ್ಲಿಯೇ ಖಟಕ ಚಿಂಚೋಳಿಯಲ್ಲಿ 'ಗಾಂಧಿ ಆಶ್ರಮ'ವನ್ನ ಸ್ಥಾಪಿಸಿ ಅಂದಿನ ಕಾಲದಲ್ಲಿ ವಯಸ್ಕರಿಗೆ ಶಿಕ್ಷಣವನ್ನ ಕೊಡುವ ಪದ್ಧತಿ ಇಟ್ಟುಕೊಂಡಿದ್ದರು. ಇವರು ಧಾರವಾಡದಲ್ಲಿ ದೈಹಿಕ ಶಿಕ್ಷಕರ ತರಬೇತಿ ಪಡೆಯುತ್ತಿರುವಾಗ, ದ.ರಾ.ಬೇಂದ್ರೆ, ಬೆಟಗೇರಿ ಕೃಷ್ಣ ಶರ್ಮ ಮುಂತಾದ ಹಿರಿಯ ಸಾಹಿತಿಗಳ ಸಂಗದಿಂದ ಇವರಿಗೆ ಸಾಹಿತ್ಯದ ಅಭಿರುಚಿ ಬೆಳೆಯಿತು. ಇದರ ಫಲವಾಗಿಯೇ ಒಂದು ನಾಟಕ ಮತ್ತು ಏಳು ಜೀವನ ಚರಿತ್ರೆಗಳನ್ನ ರಚಿಸಿದ್ದಾರೆ.

ಪಂಚಾಕ್ಷರಿಯವರು ಮೊದಲು ನಾಟಕ ರಚಿಸಿದ್ದರು. ಅದು ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ. ಇದು ಅಂದು ಜನಪ್ರಿಯವಾಗಿತ್ತು. ಈ ಕೃತಿಯು ಬೀದರ ಭಾಷೆಯ ಪ್ರಪ್ರಥಮ ಕೃತಿಯಾಗಿದೆ

ಎಂದು ತಿಳಿದು ಬಂದಿದೆ. ಇವರು ಸ್ವತಃ ವೀರರಸ ಪ್ರೀಯರು, ದೇಶ ಭಕ್ತರು, ಭಾಷಾಭಕ್ತರು ಅಲ್ಲದೆ ಮಾನವೀಯ ಗುಣಗಳನ್ನ ಹೊಂದಿರುವ ಇವರು ಉತ್ತಮ ಕೃತಿಕಾರರೆಂದು ಈ ನಾಟಕದಿಂದ ತಿಳಿದುಬಂದಿದೆ.

ಶ್ರೀ ಪಂಚಾಕ್ಷರಿಯವರು ಬೀದರ ಜಿಲ್ಲೆಯ ಸಾಧು, ಸಂತರ ಶರಣರ, ರಾಜಕಾರಣಿಗಳ, ಸಮಾಜ ಸುಧಾರಕರ ಮುಂತಾದವರ ಜೀವನ ಚರಿತ್ರೆಯನ್ನು ನೀಡುವುದರ ಮೂಲಕ ಚರಿತ್ರಕಾರರೆಂದೇ ಹೆಸರುವಾಸಿಯಾಗಿದ್ದಾರೆ. ಇವರು ರಚಿಸಿದ ಚರಿತ್ರೆಗಳಲ್ಲಿ 'ವಿಶ್ವಪುತ್ಥಳಿ ರೇವಪಯ್ಯನವರು'. ಈ ಚರಿತ್ರೆಯು ಇಂದಿನ ಜನಾಂಗದ ಮೇಲೆ ಪ್ರಭಾವ ಬೀರಿದೆ. ಆದ್ದರಿಂದಲೆ ಈ ಕೃತಿಯೂ ಮೂರು ಸಲ ಮುದ್ರಣಗೊಂಡಿದೆ.

ಸಜ್ಜನರ ಸಂಗದಲ್ಲಿ ಎಂಬ ಕೃತಿಯಲ್ಲಿ ಒಟ್ಟು ಹದಿನಾಲ್ಕು ಜನ ವ್ಯಕ್ತಿಗಳ ವ್ಯಕ್ತಿ ಚಿತ್ರವನ್ನು ಚಿತ್ರಿಸಿದ್ದಾರೆ. ಇವರು ಕುಶಲ ಚಿತ್ರಕಾರರಂತೆ ಒಂದೆರಡು ವಾಕ್ಯಗಳಲ್ಲಿ ವ್ಯಕ್ತಿಯ ರೂಪವನ್ನ ಕಣ್ಮುಂದೆ ಬಂದು ನಿಲ್ಲುವಂತೆ ಚಿತ್ರಿಸಿದ್ದಾರೆ.

ಸಮಾಜವಾದಿ ಹೋರಾಟಗಾರ ವೈಜಿನಾಥ ಪಾಟೀಲರು ಹೈದ್ರಾಬಾದ ಕರ್ನಾಟಕದ ಸರ್ವತೋಮುಖದ ಅಭಿವೃದ್ಧಿಗಾಗಿ ಹೋರಾಡಿದ್ದನ್ನು ಮತ್ತು ಅವರ ರಾಜಕೀಯ ಧುರೀಣರಾದುದನ್ನು ಈ ಕೃತಿಯಲ್ಲಿ ಚಿತ್ರಿಸಿದ್ದಾರೆ. ಚಕ್ರಕೋಟಿ ಬಾಯವ್ವ ಕೃತಿಯು ಸರಳ ಭಾಷೆಯಲ್ಲಿ ಮೂಡಿ ಬಂದ ಕೃತಿಯಾಗಿದೆ. ಇದರಲ್ಲಿ ಅವರ ಜೀವನ ಪ್ರಮುಖ ಘಟನೆಗಳು ಮತ್ತು ಅವರು ಮಾಡಿದ ಅನೇಕ ಪವಾಡಗಳು ಇಂದಿನ ಯುವ ಜನಾಂಗದ ಮೇಲೆ ಪರಿಣಾಮ ಬೀರುವಂತೆ ಚಿತ್ರಿಸಿದ್ದಾರೆ.

ಡಾ. ಚನ್ನಬಸವ ಪಟ್ಟದ್ದೇವರ ಜೀವನ ಹೋರಾಟದ ಬದುಕನ್ನು ಅವರ ಚರಿತ್ರೆಯ ಮೂಲಕ ಅವರ ವ್ಯಕ್ತಿತ್ವವನ್ನ ಬಣ್ಣಿಸಿದ್ದಾರೆ. ಇವರು ಅವತಾರಿ ಪುರುಷರೆಂದು ತಿಳಿದುಬರುತ್ತದೆ

ಸರ್ವೋದಯದ ಧುರೀಣರಾದ ಮಹಾದೇವಪ್ಪಾ ಮೀಸೆಯರು ಎಲೆಯ ಮರೆಯ ಹೂವಿನಂತೆ ಜೀವನವನ್ನು ಸವೆಸಿದವರು. ನಿಸ್ವಾರ್ಥ ತ್ಯಾಗಿಗಳು ಇದ್ದರು. ಬೀದರ ಜನರ ಗಣನೆಗೆ ಬರಲಿಲ್ಲ. ಇಂಥ ಮಹಾನ ವ್ಯಕ್ತಿಯ ಜೀವನ ಚರಿತ್ರೆಯನ್ನ ಲೇಖಕರು ಬರೆದದ್ದು ಸುತ್ತ್ಯಾರ್ಹವಾಗಿದೆ.

ಪಂಚಾಕ್ಷರಿ ಪುಣ್ಯಶೆಟ್ಟಿಯವರು ಸ್ವಾತಂತ್ರ ಹೋರಾಟಗಾರರಾದ ಬಸವರಾಜ ಹುಡಗಿ ಅವರ ಚರಿತ್ರೆಯಲ್ಲಿ ಅಂದಿನ ಕಾಲಮಾನದ ಘಟನೆಗಳೊಂದಿಗೆ ಮೇಳೈಯಿಸಿ ಬರೆದದ್ದು ಒಂದು ಸಂಶೋಧನ ಕೃತಿಯಾಗಿದೆ. ಇವರು ಜೀವನವು ಸ್ವಾತಂತ್ರ ಹೋರಾಟಕ್ಕೆಂದೆ ಮೀಸಲ್ಪಟ್ಟಿದ್ದನ್ನು ಬೀದರ ಜನತೆಗೆ ತಿಳಿಸಿದ್ದಾರೆ.

ಇವರ ಈ ಎಲ್ಲ ಜೀವ ಚರಿತ್ರೆಗಳು ಇಂದಿನ ಯಾವ ಜನಾಂಗಕ್ಕೆ ದಾರೀದೀಪವಾಗಲಿವೆ. ಅವರು ಬರೆದ ಚರಿತ್ರೆಗಳು ಸಾಮಾನ್ಯ ಚರಿತ್ರೆಗಳಿಲ್ಲ. ಇವೆಲ್ಲವುಗಳಿಂದ ಅಂದಿನ ಇತಿಹಾಸ, ರಾಜಕೀಯ, ಸಾಮಾಜಿಕ, ಧಾರ್ಮಿಕ ಸ್ಥಿತಿಗತಿಗಳನ್ನು ತಿಳಿಸುವ ಚರಿತ್ರೆಗಳಾಗಿವೆ. ಇವುಗಳು ಇತಿಹಾಸ ರಚಿಸುವಲೂ ಸಹಾಯಕಾರಿಯಾಗಿವೆ. ಹೀಗೆ ಶ್ರೀ ಪಂಚಾಕ್ಷರಿ ಪುಣ್ಯ ಶೆಟ್ಟಿ ಅವರು ಬದುಕು ಬರಹ ಒಂದೆಯಾಗಿವೆ. ಬರಹದಲ್ಲಿ ಬದುಕು, ಬದುಕಿನಲ್ಲಿ ಬರಹ ಹಾಸುಹೊಕ್ಕಾಗಿವೆ. ಅವರು ಏನೇ ಬರೆದರು ಅದು ಸತ್ಯ ಶುದ್ಧಿ

ನಿಷ್ಪ್ರಮಾಣಿಕತೆಯಿಂದ ಕೂಡಿರುತ್ತದೆ.

ಶ್ರೀ ಪಂಚಾಕ್ಷರಿ ಪುಣ್ಯಶೆಟ್ಟಿಯವರು ಶಿಕ್ಷಕ ವೃತ್ತಿಯ ಜೊತೆಗೆ ಸಾಹಿತ್ಯ ರಚಿಸುವುದಲ್ಲದೆ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಬೀದರ ಜಿಲ್ಲೆಯಲ್ಲಿ ಕನ್ನಡದ ಜಾಗ್ರತಿಯನ್ನು ಮೂಡಿಸಿದ್ದಾರೆ. ಹಾಗೂ ಕುವೆಂಪು ಕನ್ನಡ ಸಂಘವನ್ನ ಸ್ಥಾಪಿಸಿ ಅದರಡಿಯಲ್ಲಿ ಅನೇಕ ಕನ್ನಡ ಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ಅಲ್ಲದೆ ಅಖಿಲ ಭಾರತದ ಶರಣ ಸಾಹಿತ್ಯ ಪರಿಷತ್ತಿನ ಜಿಲ್ಲಾ ಘಟಕದ ಅಧ್ಯಕ್ಷರಾಗಿ ಮೂರು ಜಿಲ್ಲಾ ಸಾಹಿತ್ಯ ಸಮ್ಮೇಳನಗಳು ಮತ್ತು ನಾಲ್ಕು ತಾಲೂಕಾ ಸಮ್ಮೇಳನ ಅಲ್ಲದೆ ಒಂದು ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ ಆಯೋಜಿಸಿದ ಕೀರ್ತಿ ಇವರದ್ದಾಗಿದೆ. ಹಾಗೂ ೯ ನೇ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದದ್ದು ಇವರ ಗೌರವ ಹೆಚ್ಚಳಕ್ಕೆ ಕಾರಣವಾಗಿದೆ.

ಒಬ್ಬ ಲೇಖಕರ ಕುರಿತು ಅಧ್ಯಯನ ಮಾಡುವಾಗ ಆ ಲೇಖಕರು ಜನಿಸಿದ ಮನೆತನ, ಪರಿಸರ, ಪ್ರೇರಣೆ, ಮುಂತಾದ ಮಾಹಿತಿಗಳನ್ನ ಸಂಗ್ರಹಿಸಿ ಅವರ ಜೀವನದ ಕಿರು ಪ್ರಬಂಧವನ್ನು ಒದಗಿಸುವ ಪ್ರಯತ್ನ ಈ ಪ್ರಬಂಧದಲ್ಲಿ ಮಾಡಲಾಗಿದೆ. ಈ ನಿಬಂಧದಲ್ಲಿ ಅವರ ಬದುಕಿನ ಮೇಲೆ ಬೆಳಕು ಬೀರುವ ದೃಷ್ಟಿಯಿಂದ ಅವರನ್ನು ಸಂದರ್ಶಿಸಿ ಅವರ ಜೀವನದ ಬಗ್ಗೆ ಪ್ರಸ್ತುತ ಲೇಖನವು ಮನೆತನ, ಬಾಲ್ಯ ಮತ್ತು ಶಿಕ್ಷಣ, ಕೌಟುಂಬಿಕ ಜೀವನ ವೃತ್ತಿ ಜೀವನ, ಸಾಹಿತ್ಯಿಕ ಪರಿಸರ, ಸಾಮಾಜಿಕ ಸೇವೆ, ಅಲ್ಲದೆ ವ್ಯಕ್ತಿತ್ವ ಮತ್ತು ಅವರು ರಚಿಸಿದ ಸಾಹಿತ್ಯ ಕೃತಿಗಳ ಬಗ್ಗೆ ಕಿರು ಪರಿಚಯ ಮಾಡಲಾಗಿದೆ.

ಈ ಪ್ರಸ್ತುತ ಕಿರು ಪ್ರಬಂಧವು ಆಕರ ಸಾಮಗ್ರಿಗಳ ಆಧಾರದಿಂದ ಸಂದರ್ಶನ ಮತ್ತು ನನ್ನ ಜ್ಞಾನದ ಮಿತಿಯಲ್ಲಿ ಶ್ರೀ ಪಂಚಾಕ್ಷರಿಯವರ ಬದುಕು ಬರಹದ ಮೇಲೆ ಬೆಳಕು ಬೀರುವ ಪ್ರಯತ್ನ ಮಾಡಲಾಗಿದೆ. ಸಂಶೋಧನೆಯೂ ಎಂದಿಗೂ ನಿಂತ ನೀರಲ್ಲ. ಅದು ನಿರಂತರವಾಗಿ ನಡೆಯುವ ಕಾರ್ಯ ಎಂದು ತಿಳಿದು ನಾನು ನನ್ನ ಅಧ್ಯಯನದ ಅನುಭವದ ಮಿತಿಯಲ್ಲಿ ನನ್ನ ಸಂಶೋಧನೆಯ ವಿಚಾರಗಳನ್ನು ಇಲ್ಲಿ ಸಾದರ ಪಡಿಸಿದ್ದೇನೆ.

ಅನುಬಂಧ - ೧

# ವ್ಯಕ್ತಿಪರಿಚಯ

೧. ಹೆಸರು : ಪಂಚಾಕ್ಷರಿ

೨. ತಂದೆ ಹೆಸರು : ಶಿವರುದ್ರಪ್ಪಾ

೩. ತಾಯಿಯ ಹೆಸರು : ನೀಲಮ್ಮಾ

೪. ಜನ್ಮ ದಿನಾಂಕ : ೦೩-೦೨-೧೯೩೫

೫. ಹುಟ್ಟೂರು : ಐನೊಲಿ, ತಾ.ಚಿಂಚೋಳಿ, ಜಿ. ಗುಲಬರ್ಗಾ

೬. ವಾಸಸ್ಥಳ : ಕುಂಬಾರವಾಡ, ಬೀದರ.

೭. ವಿದ್ಯಾಭ್ಯಾಸ : ★ ಪ್ರಾಥಮಿಕ ಅಭ್ಯಾಸ: ೧,೨,೩,೪ ನೇ ಇಯತ್ತೆ ಉರ್ದು ಮಾಧ್ಯಮದಲ್ಲಿ ಐನೋಲಿಯಲ್ಲಿ ೧೯೪೨-೪೬.

★ ೫,೬,೭ನೇ ಇಯತ್ತೆ ಉರ್ದು ಮಾಧ್ಯಮ, ಚಿಂಚೋಳಿಯಲ್ಲಿ ೧೯೪೬-೧೯೪೯

★ ಹೈಸ್ಕೂಲ ಅಭ್ಯಾಸ: ೮ನೇ ಇಯತ್ತೆ ತಾಂಡೂರದಲ್ಲಿ ೧೯೪೯.

★ ೯ ನೇ ಇತತ್ತೆ ಚಿಂಚೋಳಿಯಲ್ಲಿ ಉರ್ದು ಮಾಧ್ಯಮ ೧೯೫೦.

★ ೧೦ನೇ ವರ್ಗ ಬೀದರದಲ್ಲಿ ಕನ್ನಡ ಮಾಧ್ಯಮ ೧೯೫೨.

★ ಧಾರವಾಡದಲ್ಲಿ ಸಿ.ಪಿ.ಎಡ್.

★ ಬಿ.ಎ.ಪಾಸಾದರು.

★ ಬಿ.ಪಿ.ಎಡ್.ಬೆಂಗಳೂರು ವಿಶ್ವವಿದ್ಯಾಲಯ.

೮. ಸರಕಾರಿ ಸೇವೆ : ೧೯೫೩ ರಲ್ಲಿ ಶಿಕ್ಷಕರಾಗಿ ಧುಮ್ಮನಸೂರಿನಲ್ಲಿ ನಿಯುಕ್ತಿ

ಶಿಕ್ಷಕರಾಗಿ ತೂಗಾಂವ ಕಟ್ಟಿಯಲ್ಲಿ

ಶಿಕ್ಷಕರಾಗಿ ಬೇಲೂರಿನಲ್ಲಿ

ಬಡ್ತಿಯ ಮೇಲೆ ಖಟಕ ಚಿಂಚೋಳಿಯಲ್ಲಿ ಶಿಕ್ಷಕರಾಗಿ

ಮಾಧ್ಯಮಿಕ ಶಾಲೆಯ ಶಿಕ್ಷಕರಾಗಿ ಮನ್ನಳಿಯಲ್ಲಿ

ಬೀದರನ ಮಂಗಲಪೇಟದಲ್ಲಿ ಶಿಕ್ಷಕರಾಗಿ

ಬೀದರನ ಮಾದರಿ ಶಾಲೆಗೆ ವರ್ಗವಾಗಿ ಬಂದರು.
ಆಣದೂರದಲ್ಲಿ ದೈಹಿಕ ಶಿಕ್ಷಕರಾಗಿ
ಎಸ್.ಟಿ.ಬಿ.ಟಿ. ಶಿಕ್ಷಕರ ತರಬೇತಿ ಶಾಲೆಯಲ್ಲಿ
ಬೀದರ ಪದವಿಪೂರ್ವಕಾಲೇಜು, ದೈಹಿಕ ಶಿಕ್ಷಕ
ಸರಕಾರಿ ಪ್ರೌಢ ಶಾಲೆ ಬಸವಕಲ್ಯಾಣ ದೈಹಿಕ ಶಿಕ್ಷಕ
ಬೇಮಳಖೇಡದಲ್ಲಿ ದೈಹಿಕ ಶಿಕ್ಷಕ
ಮಾಳೆಗಾಂವದಲ್ಲಿ ದೈಹಿಕ ಶಿಕ್ಷಕ .

೯. ನಿವೃತ್ತಿ : ಮೊಳೆಗಾಂವದಲ್ಲಿ 1993 ರ ಫೆಬ್ರವರಿಯಲ್ಲಿ ನಿವೃತ್ತಿ ಹೊಂದಿದ್ದರು.

೧೦. ಸದ್ಯ : ನಿವೃತ್ತ ಶಿಕ್ಷಕರಾಗಿ ಕನ್ನಡ ಮತ್ತು ಸಾಹಿತ್ಯ ಸೇವೆ.

೧೧. ಕೃತಿಗಳು :

೧. ೧೯೬೩ ರಲ್ಲಿ ಸ್ವತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ ನಾಟಕ ಬಿಡುಗಡೆ.

೨. ೧೯೭೮ ರಲ್ಲಿ ವಿಶ್ವ ಪುತ್ಥಳಿ ಶ್ರೀ ರೇವಪಯ್ಯನವರ ಜೀವನ ಚರಿತ್ರೆ ಬಿಡುಗಡೆ.

೩. ೧೯೮೫ ರಲ್ಲಿ ಸಜ್ಜನರ ಸಂಗದಲ್ಲಿ ಪುಸ್ತಕ ಬಿಡುಗಡೆ.

೪. ೧೯೮೭ ರಲ್ಲಿ ಸ್ವಾತಂತ್ರ ಹುತಾತ್ಮ ಬಸವರಾಜ ಹುಡಗಿ.

೫. ೧೯೯೮ರಲ್ಲಿ ಸಮಾಜವಾದಿ ಹೋರಾಟಗಾರ ಚಂದ್ರಶೇಖರ ಪಾಟೀಲ.

೬. ೧೯೯೮ ರಲ್ಲಿ ಮಹಾಯೋಗಿಣಿ ಚಕ್ರಕೋಟಿ ಬಾಯವ್ವ.

೭. ೧೯೯೮ರಲ್ಲಿ ಮಹಾಯೋಗಿಣಿ ಚಕ್ರಕೋಟಿ ಬಾಯವ್ವ.( ಹಿಂದಿಯಲ್ಲಿ)

೮. ೨೦೦೨ರಲ್ಲಿ ಡಾ. ಚನ್ನಬಸವ ಪಟ್ಟದ್ದೇವರ ಹೋರಾಟದ ಬದುಕು.

೯. ೨೦೦೫ ರಲ್ಲಿ ಮಹಾದೇವಪ್ಪಾ ಮೀಸೆ.

೧೦. ೨೦೦೭ ರಲ್ಲಿ ಹುತಾತ್ಮ ಬಸವರಾಜ ಹುಡಗಿ ಅಂದಿನ ಕಾಲಮಾನ.

ಅನುಬಂಧ - ೨

# ಗ್ರಂಥ ಋಣ


೧. ಲೇ: ಪಂಚಾಕ್ಷರಿ ಪುಣ್ಯಶೆಟ್ಟಿ.
ಕೃತಿ: ಡಾ. ಚನ್ನಬಸವ ಪಟ್ಟದ್ದೇವರ ಹೋರಾಟದ ಬದುಕು.
ಪ್ರಕಾಶಕರು: ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಜಿಲ್ಲಾ ಘಟಕ, ಬೀದರ.
ಮುದ್ರಣ: ಜನೇವರಿ - ೨೦೦೨.

೨. ಲೇ: ಪಂಚಾಕ್ಷರಿ ಪುಣ್ಯಶೆಟ್ಟಿ.
ಕೃತಿ: ಮಹಾದೇವಪ್ಪಾ ಮೀಸೆ
ಪ್ರಕಾಶಕರು:ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಜಿಲ್ಲಾ ಘಟಕ, ಬೀದರ.
ಮುದ್ರಣ: ೨೦೦೫.

೩. ಲೇ: ಪಂಚಾಕ್ಷರಿ ಪುಣ್ಯಶೆಟ್ಟಿ.
ಕೃತಿ: ಮಹಾಯೋಗಿಣಿ ಚಕ್ರಕೋಟಿ ಬಾಯವ್ವ
ಪ್ರಕಾಶಕರು: ಸರ್ವೋದಯ ವಾಚನಾಲಯ ಟ್ರಸ್ಟ ಬೀದರ.
ಮುದ್ರಣ: ಫೆಬ್ರುವರಿ ೧೯೯೮.

೪. ಲೇ: ಪಂಚಾಕ್ಷರಿ ಪುಣ್ಯಶೆಟ್ಟಿ.
ಕೃತಿ: ವಿಶ್ವ ಪುತ್ಥಳಿ ರೇವಪ್ಪಯ್ಯನವರು
ಪ್ರಕಾಶಕರು: ಶ್ರೀ ಸಿದ್ದ ಬಸವೇಶ್ವರ ಸಾಹಿತ್ಯ ಪ್ರಕಾಶನ, ಬಬಲಾದ.
ಪ್ರಥಮ ಮುದ್ರಣ: ೧೯೭೮
ಎರಡನೆ ಮುದ್ರಣ : ೧೯೯೫

೫. ಲೇ: ಪಂಚಾಕ್ಷರಿ ಪುಣ್ಯಶೆಟ್ಟಿ.
ಕೃತಿ: ಸಜ್ಜನರ ಸಂಗದಲ್ಲಿ
ಪ್ರಕಾಶಕರು: ಶಿವನಂದನ ಪ್ರಕಾಶನ, ಬೀದರ.
ಮುದ್ರಣ: ೧೯೮೫

೬. ಲೇ: ಪಂಚಾಕ್ಷರಿ ಪುಣ್ಯಶೆಟ್ಟಿ.
ಕೃತಿ: ಸಮಾಜವಾದಿ ಹೋರಾಟಗಾರ ವೈಜಿನಾಥ ಪಾಟೀಲ
ಪ್ರಕಾಶಕರು: ಶಿವನಂದನ ಪ್ರಕಾಶನ ಕುಂಬಾರಗೇರಿ, ಬೀದರ
ಮುದ್ರಣ: ೧೯೯೮.

೭. ಲೇ: ಪಂಚಾಕ್ಷರಿ ಪುಣ್ಯಶೆಟ್ಟಿ
ಕೃತಿ: ಸ್ವಾತಂತ್ರ್ಯ ಹುತಾತ್ಮ ಚಂದ್ರಶೇಖರ ಆಜಾದ
ಪ್ರಕಾಶಕರು: ಮಲ್ಲಪ್ಪಾ ಮಾಣಿಕಪ್ಪಾ ಕರ್ಪೂರ್, ಶಿವನಂದನ ಪ್ರಕಾಶನ, ಬೀದರ.
ಮುದ್ರಣ: ೧೯೭೩.

೮. ಲೇ: ಪಂಚಾಕ್ಷರಿ ಪುಣ್ಯಶೆಟ್ಟಿ
ಕೃತಿ: ಹುತಾತ್ಮ ಬಸವರಾಜ ಹುಡಗಿ ಅಂದಿನ ಕಾಲಮಾನ
ಪ್ರಕಾಶಕರು: ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಜಿಲ್ಲಾ ಘಟಕ, ಬೀದರ.
ಮುದ್ರಣ: ೨೦೦೭.

೯. ಲೇ: ಗೌರವ ಸಂಪಾದಕರು: ಬಸವಲಿಂಗ ಪಟ್ಟದ್ದೇವರು
ಕೃತಿ: ಚನ್ನಬಸವ ಕಲ್ಯಾಣ (ಸ್ಮರಣ ಸಂಚಿಕೆ)
ಪ್ರಕಾಶಕರು: ಲಿಂ. ಪೂಜ್ಯ ಡಾ. ಚನ್ನಬಸವಪಟ್ಟದ್ದೇವರ ಏಳನೇ ಸ್ಮರಣೋತ್ಸವ ಮತ್ತು ಅಖಿಲ ಭಾರತ೯ ನೇ ಶರಣ ಸಾಹಿತ್ಯ ಸಮ್ಮೇಳನ ಸ್ವಾಗತ ಸಮಿತಿ, ಹಿರೇಮಠ ಸಂಸ್ಥಾನ ಭಾಲ್ಕಿ ಜಿ.ಬೀದರ
ಮುದ್ರಣ: ೨೦೦೬.

೧೦. ಲೇ: ಗೌರವ ಸಂಪಾದಕರು: ಪ್ರೋ. ವೀರೇಂದ್ರ ಸಿಂಪಿ
ಕೃತಿ: ಬಸವ ಪ್ರಭೆ (ಸವಿ ಸಂಚಿಕೆ)
ಪ್ರಕಾಶಕರು: ಸ್ವಾಗತ ಸಮಿತಿ, ೭೨ ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಬೀದರ ಸ್ವಾಗತ ಸಮಿತಿ ಕಾರ್ಯಾಲಯ ಕರ್ನಾಟಕ ಸಾಹಿತ್ಯ ಸಂಘ ಕಟ್ಟಡ , ಅಂಬೇಡ್ಕರ ವೃತ್ತ, ಬೀದರ.
ಮುದ್ರಣ: ೨೦೦೬

೧೧. ಲೇ: ಸಂಪಾದಕರು: ಈಶ್ವರಯ್ಯ ಮಠ
ಕೃತಿ: ಬಸವ ಸಾಗರ
ಪ್ರಕಾಶಕರು: ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಜಿಲ್ಲಾ ಘಟಕ,
ಆದರ್ಶ ನಗರ, ಕಲಬುರ್ಗಿ.
ಮುದ್ರಣ: ೨೦೦೬.

೧೨. ಲೇ: ಸಂಪಾದಕರು: ರಮೇಶ ಮೂಲಗೆ
ಕೃತಿ: ಲಲಿತಾರವಿಂದ
ಪ್ರಕಾಶಕರು: ಕನ್ನಡ ಪ್ರಗತಿ ಸಂಘ (ರಿ) ಬೀದರ.
ಮುದ್ರಣ: ೨೦೦೭

೧೩. ಲೇ: ಪ್ರಧಾನ ಸಂಪಾದಕರು: ಪ್ರೊ. ವೀರೆಂದ್ರ ಸಿಂಪಿ.
ಕೃತಿ: ಬೀದರ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರು
ಪ್ರಕಾಶಕರು: ಜಿಲ್ಲಾ ಆಡಳಿತ ಬೀದರ
ಮುದ್ರಣ: ೧೯೯೯.

೧೪. ಲೇ: ಎಲ್.ಎಸ್. ಶೇಷಗಿರಿರಾವ
ಕೃತಿ: ಹೊಸಗನ್ನಡ ಸಾಹಿತ್ಯ
ಪ್ರಕಾಶಕರು: ಅಂಕಿತ ಪುಸ್ತಕ, ಶಾಮಸಿಂಗ ಕಾಂಪ್ಲೆಕ್ಸ್ ಗಾಂಧಿ ಬಜಾರ, ಮುಖ್ಯ ರಸ್ತೆ
ಬಸವನಗುಡಿ, ಬೆಂಗಳೂರು.
ಮುದ್ರಣ: ೨೦೦೬.

೧೫. ಲೇ: ರಂ. ಶ್ರೀ. ಮುಗಳಿ
ಕೃತಿ: ಕನ್ನಡ ಸಾಹಿತ್ಯ ಚರಿತ್ರೆ
ಪ್ರಕಾಶಕರು: ಗೀತಾ ಬುಕ್ ಹೌಸ್ ಮೈಸೂರು
ಮುದ್ರಣ: ೨೦೦೫.

೧೬. ಲೇ: ಸಂಪಾದಕರು ರಾಜಪ್ಪ ದಳವಾಯಿ
ಕೃತಿ: ಕನ್ನಡ ಸಾಹಿತ್ಯಕೋಶ
ಪ್ರಕಾಶಕರು: ಶ್ರೀ ರಾಘವೇಂದ್ರ ಪ್ರಕಾಶನ ನಂ.೯, ದಿವಾನ್ ಖಾನ್ ಗಲ್ಲಿ
ಚಿಕ್ಕಪೇಟೆ, ಬೆಂಗಳೂರು.
ಮುದ್ರಣ: ೨೦೦೬.

೧೭. ಲೇ: ಡಾ. ಸಂಗಮೇಶ ಸವದತ್ತಿಮಠ
ಕೃತಿ: ಕನ್ನಡ ಸಾಹಿತ್ಯ ಸಂಶೋಧನ ಇತಿಹಾಸ
ಪ್ರಕಾಶಕರು: ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.
ಮುದ್ರಣ: ೨೦೦೩.

೧೮. ಲೇ: ಸಂಪಾದಕರು: ಹಂಪ ನಾಗರಾಜಯ್ಯ
ಕೃತಿ: ಬೀದರ ಸಾಹಿತ್ಯ ಸಮ್ಮೇಳನ ೧೯೮೫.
ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
ಮುದ್ರಣ: ೧೯೮೬.

೧೯. ಲೇ: ಡಾ. ಸರೋಜನಿ ಚಲವಾರ
ಕೃತಿ: ಜಯದೇವಿ ತಾಯಿ ಲಿಗಾಡೆ
ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
ಮುದ್ರಣ: ೧೯೯೨.

೨೦. ಲೇ: ಡಿ.ಆರ್. ನಾಗರಾಜ
ಕೃತಿ: ಶಕ್ತಿ ಶಾರದೆಯ ಮೇಳ
ಪ್ರಕಾಶಕರು: ಅಕ್ಷರ ಪ್ರಕಾಶನ, ಸಾಗರ
ಮುದ್ರಣ: ೧೯೮೭.

೨೧. ಕೃತಿ: ಸಂಕ್ಷಿಪ್ತ ಕನ್ನಡ ನಿಘಂಟು
ಪ್ರಕಾಶಕರು: ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು
ಮುದ್ರಣ: ೨೦೦೧.

೨೨. ಉತ್ತರ ಕಾರ್ನಾಟಕ ದಿನ ಪತ್ರಿಕೆ ಬೀದರದಲ್ಲಿನ ಲೇಖನಗಳು:

೧. ಪ್ರಗತಿಪರ ಗ್ರಾಮ ಬೇಮಳಖಾಡಾ- ೬-೨-೧೯೮೩.
೨. ಚಂದ್ರಂಪಳ್ಳಿ ರೈತರ ಬದುಕಿನಲ್ಲಿ ಸಂತೃಪ್ತಿ ತಂದ ಯೋಜನೆ- ೨೪-೪-೧೯೮೩.
೩. ಆದರ್ಶ ಪ್ರಾಧ್ಯಾಪದ ಡಾ. ಮಾಣಿಕರಾವ ಧನಶ್ರೀ - ೨೧-೩-೧೯೮೬.
೪. ದಾಸೋಹ ಮೂರ್ತಿ ಶ್ರೀ ಹಳೆಂಬರ ವೀರಭದ್ರಪ್ಪನವರು- ೪-೫-೧೯೮೬
೫. ಸಂಯಮಶೀಲ ಆದರ್ಶ ಪ್ರಾಧ್ಯಾಪಕ ಬಸವಲಿಂಗಪ್ಪ ಕೊಂಡ-೩-೭-೧೯೮೬
೬. ಲಂಬಾಣಿ ಜನಾಂಗದವರ ಜೀವನದ ಬಗೆಗೆ ಸಮೀಕ್ಷೆ- ೧೪-೮-೧೯೮೬
೭. ಬಿ.ವಿ.ಬಿ.ಭೂಮರೆಡ್ಡಿ ಕಾಲೇಜು ನಡೆದು ಬಂದ ದಾರಿ-೨೨-೨-೧೯೮೮
೮. ವರಕವಿ ಕರಬಸಪ್ಪ ಐನೊಲಿ- ೬-೩-೧೯೯೨.
೯. ಪ್ರತಿಭಾವಂತ ಪ್ರಾಧ್ಯಾಪಕ ಕೆ. ಎಸ್. ಮೂರ್ತಿ - ೧೨-೮-೧೯೯೪
೧೦. ಲಿಂಗಾನಂದ ಮಹಾಸ್ವಾಮಿಗಳು ಮಾಡಿದ ಕ್ರಾಂತಿ-೨೯-೮-೧೯೯೫
೧೧. ಮೀನಕೇರಿಯ ಗಿರಿಯಪ್ಪ ಗೌಡರು - ಜನದನಿ. -೨೫-೮-೧೯೯೫
೧೨. ಕಲ್ಯಾಣರಾವ ಮೋಳಕೇರಿ - ಜನದನಿ.



ಅಖಿಲ ಭಾರತ ೭೩ ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪಂಚಾಕ್ಷರಿ ಪುಣ್ಯಶೆಟ್ಟಿ ಅವರಿಗೆ ಸ್ವಾಗತ ಸಮಿತಿಯ ಪದಾಧಿಕಾರಿಗಳಿಂದ ಸನ್ಮಾನ



೨೦೦೮ ರಲ್ಲಿ ನಡೆದ ಜಿಲ್ಲಾ ೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನ ವಹಿಸಿದ್ದಾಗ ಪಂಚಾಕ್ಷರಿ ಪುಣ್ಯಶೆಟ್ಟಿ ದಂಪತಿಗಳಿಗೆ ಮುಖ್ಯಮಂತ್ರಿ ಚಂದ್ರು ಹಾಗೂ ಸ್ವಾಗತಸಮಿತಿಯಿಂದ ಸನ್ಮಾನ



ಲೇಖಕರಾದ ಪಂಚಾಕ್ಷರಿ ಮಣ್ಣ್ಯಾಶೆಟ್ಟಿ ಅವರನ್ನು ಸಂಶೋಧಕರು ಸಂದರ್ಶಿಸುತ್ತಿರುವುದು



ಲೇಖಕರಾದ ಪಂಚಾಕ್ಷರಿ ಪುಣ್ಯಾಶೆಟ್ಟಿ ಅವರೊಂದಿಗೆ ಅವರ ಧರ್ಮಪತ್ನಿ ಶ್ರೀಮತಿ ಸಂಗಮ್ಮ ಪುಣ್ಯಾಶೆಟ್ಟಿ

